ಅಧ್ಯಾತ್ಮಗ್ರಂಥಾವಳಿ

# ರಸನಿಮಿಷಗಳು

(ಅಧ್ಯಾತ್ಮಚಿಂತನೆಗೆ ಅರ್ಹವಾದ ಬಿಡಿಲೇಖನಗಳು)

ಬರೆದವರು :

ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು

ಕ್ರಮಾಂಕ : ೯೧

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ - ೫೭೩೨೧೧

೦೮೧೭೫-೨೫೭೩೮೨೦

೨೦೦೪

# ಮುನ್ನುಡಿ

ಶ್ರೀ ಶ್ರೀಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ಹುಬ್ಬಳ್ಳಿಯ 'ಕರ್ಮವೀರ' ವಾರಪತ್ರಿಕೆಯಲ್ಲಿ 'ಅಧ್ಯಾತ್ಮಚಿಂತನೆ' ಎಂಬ ಹೆಸರಿನಿಂದ ಬರೆಯುತ್ತಿದ್ದ ಲೇಖನಗಳಲ್ಲಿ ಕೆಲವನ್ನು ಇಲ್ಲಿ ಆರಿಸಿಕೊಡಲಾಗಿದೆ. ಒಮ್ಮೆ ಓದಿದ್ದರೂ ಇನ್ನೊಮ್ಮೆ ಇವುಗಳನ್ನು ಓದುವಾಗ ಎಷ್ಟೋಹೊಸ ವಿಚಾರಗಳು ಮತ್ತು ಉತ್ಕೃಷ್ಟ ವಿಷಯಗಳು ಮನಸ್ಸಿನಲ್ಲಿ ತೋರುವುದು. ಒಂದು ಸಲವೂ ಓದದೇ ಇದ್ದವರಿಗಂತೂ ಇದು ಅತ್ಯಂತ ಅಮೂಲ್ಯ ವಿಚಾರವೆಂದೇ ಹೊಳೆಯದೇ ಇರದು. ನಿಜವಾದ ಮಾನವನ ಜೀವನವು ಆನಂದಮಯವಾಗಿಯೂ ಶಾಂತಿಯುತವಾಗಿಯೂ ಇರುವುದಕ್ಕೆ ಇಂಥಹ ದಿವ್ಯ ಸೂಕ್ತಿಗಳು ಸಹಾಯಕವಾಗಿ ಜೀವನದಲ್ಲಿ ನವಚೇತನವನ್ನು ಕೊಡುವುದೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ವಾಚಕರೆ, ಒಮ್ಮೆ ಈ ಗ್ರಂಥವನ್ನು ಸಮಾಧಾನದಿಂದ ಶಾಂತರಾಗಿ ಓದಿರಿ. ಆಮೇಲೆ ನಿಮ್ಮ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಪರೀಕ್ಷಿಸಿಕೊಳ್ಳಿರಿ. ನಿಜವಾಗಿಯೂ ನಿಮಗೆ ಒಂದು ವಿಲಕ್ಷಣವಾದ ಪರಿಣಾಮವೂ, ಆನಂದವೂ ಉಕ್ಕೇರುವುದು. ಆಗ ನೀವೇ ಈ ಗ್ರಂಥವನ್ನು ನಿಮ್ಮ ಮಿತ್ರ ವೃಂದಕ್ಕೂ ಶುಭ ಸಮಾರಂಭಗಳಲ್ಲಿ ನಿಮ್ಮ ಬಂಧುವರ್ಗದವರಿಗೂ ಹಂಚುವರಾಗುವಿರಿ. ನಿಜವಾಗಿ ಇದು ಪುಣ್ಯತಮವಾದ ಕೆಲಸವು. ಹಾಗೆಂದೇ ಐದನೆಯ ಮುದ್ರಣದ ೧೦೦೦ ಪ್ರತಿಗಳನ್ನು ದಾವಣಗೆರೆಯ ಕೈಗಾರಿಕೋದ್ಯಮಿ

# ವಿಷಯಾನುಕ್ರಮಣಿಕೆ

೧. ಆನಂದಜೀವನ

೨. ಪ್ರಪಂಚ, ಪರಮಾತ್ಮ

೩. ನಮ್ಮ ಸುತ್ತಲೂ ಇರುವ ಆನಂದಮೂಲ

೪. ಪುರುಷಸೂಕ್ತ

೫. ಪುರುಷ

೬. ಪ್ರಕೃತಿಯ ಸೊಬಗು

೭. ಮನಸ್ಸಿನಂತೆ ಮಹಾದೇವ

೮. ಭಾವದಂತೆ ಸಿದ್ಧಿಯಾಗುವದು

೯. ತಾಳಮೇಳ

೧೦. ಅಂತಃಕರಣ

೧೧. ನಮ್ಮೊಳಗಿರುವ ಮದ್ದಿನ ಮನೆ

೧೨. ಬುದ್ಧಿವೃತ್ತಿಗಳ ಬೆಳಕು

೧೩. ಮೋಡಗಳ ಮೇಲೆ

೧೪. ಚಿಂತೆಯನ್ನು ತಪ್ಪಿಸಿಕೊಳ್ಳುವ ಉಪಾಯ

೧೫. ಕಷ್ಟಗಳನ್ನೆಲ್ಲ ಗೆದ್ದುಕೊಳ್ಳಬಹುದು

೧೬. ಸಂಪದಭಿವೃದ್ಧಿ

೧೭. ದುಃಖನಿವಾರಣೆಗೆ ಎರಡು ಮಾರ್ಗಗಳು

೧೮. ದೇವರಲ್ಲಿ ಬೇಡತಕ್ಕದ್ದು

೧೯. ದ್ವಂದ್ವಗಳು

೨೦. ಕೊಂಬೆಗೊ, ಬೇರಿಗೊ

೨೧. ನಮ್ಮ ಹತ್ತಿರದಲ್ಲಿಯೇ ಇರುವ ಪರಮಮಿತ್ರ

೨೨. ಸತ್ತವರೂ ಬದುಕಬಹುದೆ?

೨೩. ವಿಶ್ವಾಮಿತ್ರ

೨೪. ನರ, ನಾರಾಯಣ

೨೫. ರಾಮರಾಜ್ಯ

೨೬. ಒಳನೋಟ

೨೭. ವಾಸನಾಪ್ರಪಂಚ

೨೮. ಭಾವದಂತೆ ಫಲ

೨೯. ಅಂತಃಕರಣಕ್ಕೆ ಆಹಾರ

೩೦. ಪ್ರಾರ್ಥನೆ, ಸ್ತೋತ್ರ, ಧ್ಯಾನ

೩೧. ಸಾರ್ವತ್ರಿಕಧರ್ಮಕ್ಕೆ ಮೂಲ

೩೨. ಭಗವಂತನಲ್ಲಿ ಬೇಡತಕ್ಕದ್ದು

೩೩. ತಪ್ಪನ್ನು ಮನ್ನಿಸುವದು

೩೪. ಸ್ವಾತಂತ್ರ್ಯ

೩೫. ಆರೋಗ್ಯವೂ ಸ್ವಾಸ್ಥ್ಯವೂ

೩೬. ನಿಮ್ಮೊಳಗಿನ ಶಕ್ತಿ

೩೭. ಯಾತ್ರೆಯ ರೈಲು

೩೮. ಭಗವಂತನ ಯಂತ್ರವಾಗುವದು

೩೯. ಭಗವಂತನಲ್ಲಿ ನಾವೆಲ್ಲರೂ ಒಂದೇ

೪೦. ಬಡತನವನ್ನು ಕಳೆದುಕೊಳ್ಳುವದಕ್ಕೆ ಉಪಾಯ

೪೧. ಸಂಕಟದಲ್ಲಿ ವೆಂಕಟರಮಣ

೪೨. ಶ್ರೀ ಭಗವಾನುವಾಚ

೪೩. ಗೀತೆಯಲ್ಲಿ ಭಗವಂತನ ಉಪದೇಶ

೪೪. ಹೃದ್ರೋಗ

೪೫. ಕುಪ್ಪಿಯ ಮಾತ್ರೆ

೪೬. ವಾದವೂ ವೇದವೂ

೪೭. ಜಯ ಜಯ ರಾಮ್

೪೮. ಇಗೋ ಇಲ್ಲಿರುವೆ !



ಶ್ರೀ ಉಮಾಶಂಕರ್‌ರವರು ತಮ್ಮ ಮಗಳ ವಿವಾಹ ಸಂದರ್ಭದಲ್ಲಿ ಉಚಿತವಾಗಿ ಹಂಚಿದ್ದಾರೆ.

ಹಿಂದಿನ ಐದು ಮುದ್ರಣದ ೯,೦೦೦ ಪ್ರತಿಗಳು ಖರ್ಚಾಗಿ, ಈಗ ಆರನೆಯ ಮುದ್ರಣ ಬರುತ್ತಿರುವದು ಈ ಚಿಕ್ಕ ಆದರೆ ಚೊಕ್ಕ ಹೊತ್ತಿಗೆಯ ಜನಪ್ರಿಯತೆನ್ನೂ, ಒಳಗಿರುವ ಸರಳ ಸುಂದರ ಉಪದೇಶಗಳ ಮೌಲ್ಯಗಳನ್ನೂ ಪ್ರತಿಬಿಂಬಿಸುತ್ತದೆ. ಇಲ್ಲಿರುವ ನಿತ್ಯಾನಂದದಾಯಕವಾದ ಅಧ್ಯಾತ್ಮ ಅಮೃತ ಬಿಂದುಗಳ ರಸಸೇಚನೆ ಎಲ್ಲೆಡೆಗೂ ಬರುವಂತೆ ಮಾಡುವಲ್ಲಿ ನಿಮ್ಮ ಸಹಕಾರವೂ ಇರಲಿ, ಶ್ರೀಶ್ರೀಗಳ ಆಶೀರ್ವಾದ ಹೀಗೆ ಹರಡಲಿ ಎಂದು ಪ್ರಾರ್ಥಿಸುತ್ತೇವೆ.

ತಾರಣ ಸಂವತ್ಸರದ
ಚೈತ್ರ ಬಹುಳ ಸಪ್ತಮಿ
೧೧-೪-೨೦೦೪

ಪ್ರಕಾಶಕರು

|| ಓಂ ||

# ರಸನಿಮಿಷಗಳು

## ೧. ಆನಂದಜೀವನ

ನಿಮ್ಮ ವ್ಯವಹಾರವು ಹೇಗೇ ಇರಲಿ, ನೀವು ಈಗ ಯಾವ ಸ್ಥಿತಿಯಲ್ಲಿಯೇ ಇದ್ದರೂ ನಿಜವಾಗಿ ನೀವು ಆನಂದಸ್ವರೂಪನಾದ ಭಗವಂತನ ಅಂಶಭೂತರು. ಆನಂದವು ನಿಮ್ಮ ಜೀವನದ ಹಕ್ಕು.

ಆನಂದಸ್ವರೂಪನಾದ ಭಗವಂತನು ಸರ್ವವ್ಯಾಪಿಯಾಗಿರುತ್ತಾನೆ. ಅವನು ದೇವತೆಗಳಲ್ಲಿ, ಋಷಿಗಳಲ್ಲಿ, ಮಹಾತ್ಮರಲ್ಲಿ - ಇರುವಂತೆಯೇ ಮನುಷ್ಯರಲ್ಲಿ, ಸಾಮಾನ್ಯಮನುಷ್ಯರಲ್ಲಿ - ನನ್ನಲ್ಲಿಯೂ ನಿಮ್ಮಲ್ಲಿಯೂ-ಇರುತ್ತಾನೆ. ಈ ಪ್ರಪಂಚವು ದುಃಖಮಯವಾಗಿ ಕಾಣುತ್ತಿರಬಹುದು; ಆದರೆ ನಿಜವಾಗಿ ಈಗಲೆ ಅದರಲ್ಲೆಲ್ಲ ಭಗವಂತನ ಆನಂದವು ತುಂಬಿ ತುಳುಕಾಡುತ್ತಿದೆ.

ನಿಮಗೆ ಬಡತನ, ಆಶಾಭಂಗ, ಚಿಂತೆ, ದುರ್ವ್ಯಸನ, ಬೇನೆ, ಕಷ್ಟ - ಪರಂಪರೆಗಳು ಕಾಣುತ್ತಿರಬಹುದು ಆದರೂ ನೀವು ಈಗಲೇ ಇಲ್ಲಿಯೇ ಆನಂದಾಮೃತಸ್ವರೂಪನಾದ ಭಗವಂತನಲ್ಲಿಯೇ ಇದ್ದುಕೊಂಡಿರುವಿರಿ. ಇದು ಹೇಗೆಂಬುದನ್ನು ಅರಿತುಕೊಳ್ಳಬೇಕು. ಇಷ್ಟೆ. ಈ ಅರಿವೇ ಆನಂದ ಜೀವನದ ಗುಟ್ಟು.



# ೨. ಪ್ರಪಂಚ, ಪರಮಾತ್ಮ

ಪ್ರಪಂಚದಲ್ಲಿದ್ದು ವ್ಯವಹಾರವನ್ನು ಮಾಡುವದು ನಿಮಗೆ ಕಷ್ಟವಾಗಿದೆಯೆ? ನಿಮಗೆ ಎಂದಿನ ಕೆಲಸಗಳನ್ನು ಮಾಡುವದರಲ್ಲಿ ಬೇಸರವಾಗುತ್ತಿದೆಯೆ? ನಿಮ್ಮ ಯೋಗ್ಯತೆಗೆ ತಕ್ಕ ಪ್ರತಿಫಲವು ದೊರಕುವದಿಲ್ಲವೆಂದು ನಿಮಗೆ ಅನಿಸುತ್ತಿದೆಯೆ? ಕೆಲಸಮಾಡಿದಂತೆಲ್ಲ ನಿಮಗೆ ಆಯಾಸವಾಗುತ್ತಿದೆಯೆ ? ಬಡತನ, ನಿರಾಶೆ, ರೋಗ, ಮನಸ್ಸಿನ ಕಿರಿಕಿರಿ - ಮುಂತಾದವು ನಿಮ್ಮನ್ನು ಬಾಧಿಸುತ್ತಿವೆಯೆ? ನಿಮಗಿಂತ ಕಡಿಮೆಯ ಯೋಗ್ಯತೆಯವರು ಐಶ್ವರ್ಯದಲ್ಲಿ, ಅಧಿಕಾರದಲ್ಲಿ, ಸುಖಜೀವನದಲ್ಲಿ, ಉಲ್ಲಾಸದಲ್ಲಿ ಮೇಲಕ್ಕೆ ಏರುತ್ತಿರುವರೆಂದು ನಿಮಗೆ ಅಸಮಾಧಾನವುಂಟಾಗುತ್ತಿದೆಯೆ? ಹಾಗಾದರೆ ನೀವು ಪ್ರಪಂಚವನ್ನು ಬರಿಯ ಪ್ರಪಂಚವಾಗಿ ನೋಡುತ್ತಿದ್ದೀರಿ; ಅದನ್ನು ಒಳಹೊಕ್ಕು ಅದರ ತಿರುಳನ್ನು ಅರಿತಿಲ್ಲ.

ಈ ಪ್ರಪಂಚಕ್ಕೆಲ್ಲ ಒಬ್ಬ ಪರಮಾತ್ಮನಿದಾನೆ. ಆ ಪರಮಾತ್ಮನಿಂದಲೇ ಈ ಜಗತ್ತು ಬಂದಿದೆ. ನಿಜವಾಗಿ ಈ ಪ್ರಪಂಚವು ಆ ಪರಮಾತ್ಮನ ಒಂದು ವಿಭೂತಿಯು. ಇದು ಆತನ ಮಹಿಮೆಯನ್ನೇ ಸಾರುತ್ತಿದೆ. ಆತನೇ ಈ ಪ್ರಪಂಚದ ತಿರುಳು. ಇಲ್ಲಿ ಆತನ ನಿಯಮವೇ ಸಾಗುತ್ತಿದೆ. ಎಲ್ಲರಲ್ಲಿಯೂ ಆ ಪರಮಾತ್ಮನನ್ನು ಕಾಣಬೇಕೆಂಬುದೇ ಆ ನಿಯಮ; ತನ್ನಂತೆಯೇ ಪರರನ್ನು ಪ್ರೇಮದಿಂದ ಕಾಣುವವರಿಗೆ ಎಂದಿಗೂ ದುಃಖಕ್ಕೆ ಕಾರಣವಿರುವದಿಲ್ಲ, ಎಲ್ಲೆಲ್ಲಿಯೂ ಆನಂದವೇ ಇರುತ್ತದೆ. ಎಲ್ಲರೂ ಸುಖದಿಂದ ಬಾಳಲಿ! - ಎಂಬುದೇ ಆತನ ನಿಯಮು. ಪ್ರಪಂಚವನ್ನು ಪರಮಾತ್ಮನ ಮಹಿಮೆ - ಎಂದು ಕಾಣುವದನ್ನು ಅಭ್ಯಾಸಮಾಡಿರಿ. ಆಮೇಲೆ ಬೇಸರ, ನಿರಾಸೆ, ಆಯಾಸ, ಅಸಮಾಧಾನ, ಬಡತನ, ಕಿರಿಕಿರಿ - ಇವು ನಿಮ್ಮನ್ನು ಎಂದಿಗೂ ಕಾಡುವದಿಲ್ಲ.

# ೩. ನಮ್ಮ ಸುತ್ತಲೂ ಇರುವ ಆನಂದಮೂಲ

ಕೆಲವರಿಗೆ ತಾವು ವಾಯುಮಂಡಲದೊಳಗೆ ಇರುವೆವೆಂಬುದೇ ತಿಳಿದಿರುವದಿಲ್ಲ. ಆದರೆ ಅವರೂ ವಾಯುವನ್ನೇ ಸೇವಿಸಿ ಜೀವಿಸುತ್ತಿದ್ದಾರೆ. ಒಂದು ಕ್ಷಣವಾದರೂ ವಾಯುವಿಲ್ಲದೆ, ಉಸಿರಾಡದೆ, ನಮ್ಮ ಶರೀರವು ತನ್ನ ಕ್ರಿಯೆಯನ್ನು ಸರಿಯಾಗಿ ನಡೆಯಿಸಲಾರದು. ಕೆಲವರು ಪ್ರಾಣಾಯಾಮ ದಿಂದ ಹೆಚ್ಚು ವಾಯುವನ್ನು ತಮ್ಮ ಶರೀರದೊಳಗೆ ನಿಲ್ಲಿಸಿಕೊಂಡು ನಮಗಿಂತ ಸ್ವಲ್ಪ ಹೆಚ್ಚು ಕಾಲದವರೆಗೆ ಬದುಕಿರಬಹುದು. ಆದರೆ ಅವರೂ ಒಂದಲ್ಲ ಒಂದು ಕಾಲಕ್ಕೆ ಹೊರಗಿನಿಂದ ಉಸಿರನ್ನು ಎಳೆದುಕೊಳ್ಳ ಬೇಕಾಗುವದು.

ಇದರಂತೆ ನಮ್ಮೆಲ್ಲರ ಸುತ್ತಲೂ ಆನಂದಮೂಲನಾದ ಭಗವಂತನು ಇರುತ್ತಾನೆ; ಅವನು ನಮ್ಮೊಳಗೂ ಇರುತ್ತಾನೆ. ನಾವು ಆ ಆನಂದದ ಕಡಲಿನೊಳಗೇ ಇದ್ದುಕೊಂಡಿರುವೆವೆಂದು ಕೆಲವರಿಗೆ ತಿಳಿಯದೆ ಇರಬಹುದು. ಆದರೆ ಅವರೂ ಭಗವಂತನೆಂಬ ಆನಂದಾಮೃತದ ಸಮುದ್ರದಲ್ಲಿಯೇ ಇದ್ದುಕೊಂಡು ಜೀವಿಸುತ್ತಿರುತ್ತಾರೆ. ಕೆಲವರಿಗೆ ಭಗವಂತನು ಕೊಟ್ಟಿರುವ ಭೋಗರಾಶಿಯು ಮಿಕ್ಕವರಿಗಿಂತ ಸ್ವಲ್ಪ ಹೆಚ್ಚಾಗಿರಬಹುದು ; ಆದ್ದರಿಂದ ಅವರು ಭಗವಂತನೊಬ್ಬನಿದಾನೆಂಬುದನ್ನು ಮರೆತಿರಬಹುದು. ಆದರೆ ಅವರಿಗೂ ಒಂದಲ್ಲ ಒಂದು ಕಾಲಕ್ಕೆ ಭಗವಂತನ ಅವಲಂಬನೆಯಿಂದಲೇ ಜೀವಿಸುತ್ತಿದೇವೆಂಬ ಅರಿವು ಬಂದೇಬರುವದು.

ನಾಸ್ತಿಕರಿಗೂ ಆಸ್ತಿಕರಿಗೂ ಒಂದೇ ಒಂದು ಆನಂದದ ಮೂಲವಿರುವದು. ನಾವು ತಿಳಿದಿರಲಿ, ತಿಳಿಯದಿರಲಿ; ನಂಬಿರಲಿ , ನಂಬದಿರಲಿ - ಆ ಆನಂದದ ಮೂಲದಿಂದಲೇ ನಮಗೆ ಅವಶ್ಯವಾದದ್ದೆಲ್ಲವೂ ಒದಗುತ್ತಿರುವದು. ಆ ಮೂಲವೇ ಭಗವಂತನು. ಭಗವಂತನು ಆನಂದಸ್ವರೂಪನು ; ನಮ್ಮ ಜೀವನವು ಆನಂದಮಯವಾಗಿರಬೇಕೆಂಬುದು ಆತನ ಸತ್ಸಂಕಲ್ಪವು.



# ೪. ಪುರುಷಸೂಕ್ತ

ವೇದದಲ್ಲಿ 'ಪುರುಷಸೂಕ್ತ'ವೆಂಬ ಒಂದು ಭಾಗವಿದೆ. ಅದನ್ನು ಈಗಲೂ ಅನೇಕರು ಭಾರತದೇಶದಲ್ಲಿ ಪಠಿಸುತ್ತಾರೆ. ವೇದವೆಂದರೆ ಪರಮಾತ್ಮನನ್ನು ತಿಳಿಯುವದಕ್ಕೆ ಸಾಧನವಾದ ತಿಳಿವಳಿಕೆ; ಈ ತಿಳಿವಳಿಕೆಯು ಯಾವ ಧರ್ಮಗ್ರಂಥದಿಂದ ಬರುತ್ತದೆಯೋ ಅದಕ್ಕೂ ವೇದವೆಂದೇ ಹೆಸರು.

ಪರಮಾತ್ಮನಿಗೆ **ಪುರುಷ**ನೆಂಬ ಹೆಸರೂ ಇದೆ. ಪುರುಷನೆಂದರೆ ಪೂರ್ಣನಾಗಿರುವವನು ಎಂದರ್ಥ. ಪುರುಷಸೂಕ್ತದಲ್ಲಿ ಹೀಗೆಂದು ವರ್ಣಿಸಿದೆ; ಪುರುಷನಿಗೆ ಸಾವಿರ ತಲೆಗಳಿವೆ, ಸಾವಿರ ಕಣ್ಣುಗಳಿವೆ, ಸಾವಿರ ಕಾಲುಗಳಿವೆ, ಅವನು ಭೂಮಿಯನ್ನೆಲ್ಲ ಎಲ್ಲೆಲ್ಲಿಯೂ ಆವರಿಸಿಕೊಂಡು ಇದರ ಮೇಲೂ ಹತ್ತಂಗುಲ ಹೆಚ್ಚಾಗಿರುತ್ತಾನೆ. ನಾವು ನೋಡುತ್ತಿರುವ ಮನುಷ್ಯರ ಕೈಕಾಲುಗಳೂ ಕಣ್ಣುಕಿವಿಗಳೂ ತಲೆಗಳೂ ಎಲ್ಲವೂ ಆ ಪರಮಪುರುಷನಾದ ಭಗವಂತನಿಗೇ ಸೇರಿದವುಗಳಾಗಿವೆ. ಸಾವಿರಾರು ಭವನಗಳನ್ನು ಕಟ್ಟಿಕೊಂಡಿರುವ ಅರಸನಂತೆ, ಅಥವಾ ಸಾವಿರಾರು ಮನೆಗಳ ಕಿಟಕಿಗಳ ಮೂಲಕ ಬೆಳಕನ್ನು ಹರಡುತ್ತಿರುವ ಸೂರ್ಯನಂತೆ, ಆ ಪರಮಪುರುಷನು ಎಲ್ಲರ ಮೂಲಕವೂ ನಮಗೆ ಗೋಚರವಾಗುತ್ತಿರುತ್ತಾನೆ. ಆದರೆ ಅವನಿಗೆ ಈ ಶರೀರಗಳೆಂಬ ದ್ವಾರವೇನೂ ಬೇಕಿಲ್ಲ. ಸೂರ್ಯನ ಬೆಳಕು ಎಲ್ಲರ ಮನೆಯ ಅಂಗಳದಲ್ಲಿಯೂ ಇದ್ದರೂ ಸೂರ್ಯನನ್ನು ಯಾರೊಬ್ಬರೂ ತಮ್ಮ ಅಂಗಳದಲ್ಲಿ ಕಟ್ಟಿಹಾಕಿಕೊಳ್ಳುವದಕ್ಕೆ ಆಗುವದಿಲ್ಲ; ಆ ಸೂರ್ಯನು ಎಲ್ಲಕ್ಕೂ ಮೇಲೇರಿ ಅಂತರಿಕ್ಷದಲ್ಲಿ ಹೊಳೆಯುವಂತೆಯೇ ಆ ಪರಮ ಪುರುಷನು ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡು ಇರುತ್ತಾನೆ, ಆದರ ಹಂಗಿಲ್ಲದೆಯೂ ಇರುತ್ತಾನೆ!



# ೫. ಪುರುಷ

ಕೈ, ಕಾಲು, ತಲೆ-ಮುಂತಾದ ಅವಯವಗಳುಳ್ಳ ಈ ಮನುಷ್ಯನಿಗೆ ಪುರುಷನೆಂಬ ಹೆಸರು. ಪುರುಷ, ಸ್ತ್ರೀ - ಎಂಬ ಎರಡು ವಿಭಾಗಗಳನ್ನು ನಾವು ಮಾಡಿಕೊಂಡಿದ್ದೇವಷ್ಟೆ ; ಅಧ್ಯಾತ್ಮಗ್ರಂಥಗಳಲ್ಲಿ ಹೆಂಗಸರಾಗಲಿ, ಗಂಡಸರಾಗಲಿ - ಇಬ್ಬರನ್ನೂ ಪುರುಷನೆಂದೇ ಕರೆದಿರುತ್ತವೆ. ಆ ಪುರುಷನು ಪರಮಾತ್ಮನ ವಂಶದಲ್ಲಿಯೇ ಹುಟ್ಟಿರುತ್ತಾನೆಂದು ಶಾಸ್ತ್ರದಲ್ಲಿ ಹೇಳಿದೆ.

ಪರಮಾತ್ಮನಿಂದ ಆಕಾಶವುಂಟಾಯಿತಂತೆ. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಅಪ್ಪು, ಅಪ್ಪಿನಿಂದ ಪೃಥಿವಿ - ಹೀಗೆ ಪಂಚಭೂತಗಳಾಗಿವೆ. ಈ ಪಂಚಭೂತಗಳು ಬಗೆಬಗೆಯ ಪ್ರಮಾಣಗಳಿಂದ ಬೆರೆತು ಬಗೆಬಗೆಯ ಭೌತಿಕಪದಾರ್ಥಗಳಾಗಿವೆ. ನಮ್ಮ ಸುತ್ತಲೂ ಕಾಣುತ್ತಿರುವ ಮರಗಿಡಬಳ್ಳಿಗಳೆಲ್ಲ ಹೀಗೆಯೇ ಆಗಿರುತ್ತವೆ ; ಪಶುಪಕ್ಷಿ - ಮೃಗಗಳೂ ಕ್ರಿಮಿಕೀಟಗಳೂ ಹೀಗೆಯೇ ಆಗಿವೆ ; ಹೊರಗಿನ ಸಸ್ಯಗಳನ್ನು ತಿಂದು ಸಾಮಾನ್ಯ ಪ್ರಾಣಿಗಳೂ ಮನುಷ್ಯರೂ ಹುಟ್ಟಿರುತ್ತಾರೆ.

ನಮ್ಮೆಲ್ಲರ ಶರೀರದಲ್ಲಿರುವ ಹೃದಯದಲ್ಲಿಯೂ ಅದೇ ಪರಮಾತ್ಮನೇ ಒಳಹೊಕ್ಕಿರುತ್ತಾನೆ. ಪುರುಷರಾದ ನೀವೆಲ್ಲರೂ ಆ ಪರಮಪುರುಷನಾದ ಭಗವಂತನ ಮಕ್ಕಳೇ ; ಆ ಪರಮಪುರುಷನು ನಿಮ್ಮ ಹೃದಯದೊಳಗೆ ಈಗಲೂ ಇರುತ್ತಾನೆ. 'ಭಗವಂತನಿಂದಲೇ ನಮ್ಮ ಶರೀರ, ಪ್ರಾಣ, ಇಂದ್ರಿಯಗಳು, ಅಂತಃಕರಣ - ಎಲ್ಲವೂ ಬಂದಿವೆ' ಎಂಬ ನಿಮ್ಮ ವಂಶಾವಳಿಯನ್ನು ನೆನಪಿನಲ್ಲಿಟ್ಟುಕೊಳ್ಳುತ್ತಿರಿ. 'ಭಗವಂತನು ನಮ್ಮ ಹೃದಯ-ದೊಳಗೆ ಈಗಲೂ ಇರುತ್ತಾನೆ' ಎಂದು ದೃಢವಾಗಿ ನಂಬಿರಿ!



# ೬. ಪ್ರಕೃತಿಯ ಸೊಬಗು

ಸಂಜೆಯ ಹೊತ್ತು ಸೂರ್ಯನು ಅಸ್ತವಾಗುವದರಲ್ಲಿದ್ದಾನೆ. ಆಕಾಶವು ನಿರ್ಮಲವಾಗಿದೆ. ಸಣ್ಣ ಹೊಳೆಯೊಂದು ಜುಳುಜುಳು ಶಬ್ದ ಮಾಡುತ್ತಾ ಹರಿಯುತ್ತಿದೆ. ದಡದ ಮೇಲೊಂದು ಮಾವಿನ ಮರ; ಅದರ ಹಸಿರೆಲೆಗಳ ಮರೆಯಲ್ಲಿ ಗಿಳಿಗಳು ಒಂದರೊಡನೊಂದು ಮಾತಾಡುವಂತೆ ಇಂಪಾದ ಧ್ವನಿಗೈಯುತ್ತಿವೆ; ಮರದಲ್ಲಿ ಹೂಗಳು, ಕಸುಗಾಯಿ, ದೋರೆ ಗಾಯಿ, ಬಗೆಬಗೆಯ ಹಣ್ಣುಗಳು ಬಿಟ್ಟಿವೆ. ಪಕ್ಕದಲ್ಲೊಂದು ನಂಜಬಟ್ಟಲು ಹೂವಿನ ಗಿಡ; ಅದರ ಹೂಗಳು ಅರಳುತ್ತಲಿವೆ. ಇಂಥದ್ದೊಂದು ನೋಟವು ನಿಮ್ಮ ಕಣ್ಣಿಗೆ ಬಿದ್ದರೆ ನಿಮ್ಮ ಹೃದಯದಲ್ಲಿ ಇದ್ದಕ್ಕಿದ್ದ ಹಾಗೆ ಆನಂದವು ಉಕ್ಕೇರುತ್ತದೆ. 'ಹಾ! ಅತ್ತ ನೋಡಿ! ಇಲ್ಲಿ ನೋಡಿ!' ಎಂದು ನಿಮ್ಮ ಗೆಳೆಯರಿಗೆ ಆ ಕಡೆಗೆ ತಿರುಗುವಂತೆ ಹೇಳಬೇಕೆನ್ನಿಸುತ್ತದೆ. ಅಲ್ಲವೆ? ಅದೇಕೆ?

ಈ ಸೊಬಗಿನಲ್ಲಿ 'ನಾನು', 'ನನ್ನದು' ಎಂಬುದು ಏನೂ ಇಲ್ಲ. ಇದನ್ನು ಯಾರು ಬೇಕಾದರೂ ಅನುಭವಿಸಿ ಸುಖಿಸಬಹುದು. ಚಿತ್ರಶಾಲೆ, ಸಂಗೀತಕಚೇರಿಯ ಸಭೆ, ಚಲನಚಿತ್ರಗಳ ಮಂದಿರ, ನಾಟಕಶಾಲೆ-ಮುಂತಾದವುಗಳಲ್ಲಿಯೂ ನೋಟವಿದೆ, ಇಂಪಾದ ಗಾನವಿದೆ ; ಆದರೆ ಅವಕ್ಕೆ ದುಡ್ಡಿದ್ದವರಿಗೆ ಮಾತ್ರ ಪ್ರವೇಶ; ಹೋಟಲಿನಲ್ಲಿ (ಖಾನಾವಳಿಯಲ್ಲಿ) ರಸವತ್ತಾದ ಆಹಾರವಿದೆ ; ಆದರೆ ಅದಕ್ಕೂ ಹಣ ಬೇಕು ; ಇವೆರಡಕ್ಕೂ ಮಿತಿಯಿದೆ. ಆದರೆ ಪ್ರಕೃತಿಯ ಸೊಬಗಿಗೆ ಹಣವನ್ನು ಕೊಡಬೇಕಾಗಿಲ್ಲ ; ಅದಕ್ಕೆ ಕಾಲದ, ಜನಸಂಖ್ಯೆಯ, ಅಥವಾ ಮತ್ತೆ ಯಾವ ಮಿತಿಯೂ ಇಲ್ಲ. ಆ ಆನಂದವನ್ನು ಭಗವಂತನು ರಸಿಕರಿಗೆಲ್ಲ ಧಾರೆಯೆರೆದಿದ್ದಾನೆ. ಪ್ರಕೃತಿಯಲ್ಲಿ - ರುವ ಸೊಬಗೆಲ್ಲ ಆ ಭಗವಂತನಿಂದಲೇ ಬಂದದ್ದು - ಎಂಬುದನ್ನು ನೆನಪಿಟ್ಟವರಿಗೆ ಆ ಆನಂದವು ಇಮ್ಮಡಿಸುವದು.



# ೭. ಮನಸ್ಸಿನಂತೆ ಮಹಾದೇವ

ನಮಗೆ ಆಗುವ ಕಷ್ಟಗಳಿಗೆ ಮತ್ತೊಬ್ಬರು ಹೊಣೆಯೆಂದು ಭಾವಿಸಬಾರದು. ನಮ್ಮ ಸುತ್ತುವಳೆಯವು ಸುಖಮಯವಾಗಿ ಅಥವಾ ದುಃಖಮಯವಾಗಿ ತೋರುವದಕ್ಕೆ ನಾವು ನಾವೇ ಹೊಣೆಗಾರರು. ನಮ್ಮ ಮನಸ್ಸಿನಲ್ಲಿ ಉಂಟಾಗುವ ಭಾವಗಳೇ ನಮ್ಮ ವ್ಯವಹಾರದಲ್ಲಿ ನಮಗೆ ಬಲುಮಟ್ಟಿಗೆ ಸುಖವನ್ನೋ ದುಃಖವನ್ನೋ ತಂದುಕೊಡುವವು.

ಪರಮೇಶ್ವರನು ನಮ್ಮ ನಮ್ಮ ಭಾವನೆಗಳಿಗೂ ಕರ್ಮಗಳಿಗೂ ಅನುಗುಣವಾಗಿಯೇ ನಮಗೆ ಫಲವನ್ನು ಕೊಡುತ್ತಿರುವನು. ಅವಿವೇಕಿಗಳು ಈ ಗುಟ್ಟನ್ನು ಅರಿಯರು. ನಮ್ಮ ಕರ್ಮಗಳು ನಮ್ಮ ಮನಸ್ಸಿನಲ್ಲಿ ಎದ್ದು ಕೊಳ್ಳುತ್ತಿರುವ ಆಲೋಚನೆಗಳಿಂದ ಆಗುತ್ತಿರುವವು ; ಆ ಕರ್ಮಗಳಿಂದ ಆಯಾ ಫಲಗಳು ನಮಗೆ ಬಂದು ಒದಗುತ್ತಿರುವವು.

ಮನಸ್ಸಿನಲ್ಲಿ ರೋಗದ ವಿಚಾರವೇ ಇದ್ದರೆ ರೋಗವೇ ನಮ್ಮ ಹೊರಗೂ ಕಾಣಿಸಿಕೊಳ್ಳುತ್ತದೆ; ಪೂರ್ಣಾರೋಗ್ಯದ ಭಾವವು ಮನಸ್ಸಿನಲ್ಲಿ ಬಂದರೆ ಹೊರಗೂ ಆರೋಗ್ಯವೇ ಕಾಣಿಸಿಕೊಳ್ಳುತ್ತದೆ. ಬಡತನದ ಚಿಂತೆಯಿಂದ ಬಡತನವೇ ನಮ್ಮ ಜೀವನದಲ್ಲಿ ಕಾಣಿಸಿಕೊಳ್ಳುತ್ತಿರುವದು; ಐಶ್ವರ್ಯದ ಭಾವಗಳು ಐಶ್ವರ್ಯವನ್ನೇ ಕೊಡುವವು. ದೌರ್ಬಲ್ಯದ ಚಿಂತೆಯಿಂದ ನಾವು ದುರ್ಬಲರೇ ಆಗುವೆವು; ಗೆಲುವಿನ ಚಿಂತೆಯಿಂದ ನಮಗೆ ಗೆಲುವೇ ಹೊರಗೆ ತೋರಿಕೊಳ್ಳುವದು.

ನಿಮ್ಮ ಮನಸ್ಸಿನಲ್ಲಿ ಉತ್ತಮವಾದ ಶುಭಸಂಕಲ್ಪಗಳೇ ಏಳುತ್ತಿರಬೇಕೆ ? ಹಾಗಾದರೆ ಸಕಲಕಲ್ಯಾಣಗುಣಾಕರನಾದ ಭಗವಂತನನ್ನು ಚಿಂತಿಸುತ್ತಿರಿ. ನಿಮ್ಮ ಜೀವನವು ಸುಖಮಯವಾಗುವದು.



# ೮. ಭಾವದಂತೆ ಸಿದ್ಧಿಯಾಗುವದು

ಮನಸ್ಸಿನಲ್ಲಿ ಭಾವಗಳುಂಟಾಗುವಾಗ ಒಂದೊಂದೇ ಉಂಟಾಗುವವು. ಆದರೆ ಅವು ತಮಗೆ ಪುಷ್ಟಿಯನ್ನು ಕೊಡುವ ಬೇರೆ ಭಾವವನ್ನು ಎಳೆದು ಕೊಳ್ಳುವವು. ಆಯಾ ವಯಸ್ಸಿನವರು ಆಯಾ ವಯಸ್ಸಿನವರೊಡನೆ ಸೇರಿ ವ್ಯವಹರಿಸುತ್ತಾರಲ್ಲವೆ? ಹೀಗೆಯೇ ಆಯಾ ಜಾತಿಯ ಭಾವಗಳು, ಆಯಾ ಜಾತಿಯ ಭಾವಗಳನ್ನೇ ಸೇರಿಕೊಂಡು ಬೆಳೆಯುತ್ತಿರುತ್ತವೆ.

ಕಳ್ಳತನ, ಸುಳ್ಳುತನ, ರೋಗ, ದುಃಖ - ಇಂಥ ವಿಚಾರಗಳನ್ನೇ ಮನಸ್ಸಿಗೆ ತಂದುಕೊಳ್ಳುತ್ತಿರುವವರು ಆ ವಿಚಾರಗಳಿಗೆ ತಕ್ಕ ಬೇರೆಯ ವಿಚಾರ ಗಳನ್ನು ಕೂಡಿಹಾಕಿಕೊಳ್ಳುವರು. ರೋಗದ ವಿಚಾರವು ರೋಗಗಳನ್ನೂ, ಬಡತನದ ವಿಚಾರವು ಸಾಲಸೋಲಗಳನ್ನೂ, ದುಃಖದ ವಿಚಾರವು ದುಃಖ ಪರಂಪರೆಗಳನ್ನೂ ಸೆಳೆದುಕೊಂಡು ಬಾಳುತ್ತವೆ. ಇದರಂತೆ ದಾನ, ಧರ್ಮ, ಸತ್ಯ , ಆರೋಗ್ಯ , ದೀರ್ಘಾಯುಸ್ಸು , ಸೌಖ್ಯ - ಇಂಥ ವಿಚಾರಗಳನ್ನು ಮನಸಿಗೆ ತಂದುಕೊಂಡರೆ ಇವು ತಮಗೆ ತಕ್ಕ ಬೇರೆಯ ವಿಚಾರಗಳನ್ನೇ ಸೆಳೆದುಕೊಳ್ಳುವವು.

ಸಂಕಲ್ಪಗಳಿಗೆ ಮೂಲನಾದ ಭಗವಂತನು ನಮ್ಮ ನಮ್ಮ ಹೃದಯದಲ್ಲಿಯೇ ಇರುವನು. ಅವನನ್ನು ನಾವೆಲ್ಲರೂ ಈಗಲೆ ಇಲ್ಲಿಯೇ ಕಂಡುಕೊಂಡು ಶುಭಸಂಕಲ್ಪಗಳನ್ನು ಸಂಪಾದಿಸಿಕೊಳ್ಳಬಹುದು. ನಮ್ಮ ಜೀವನವನ್ನು ಆನಂದಮಯವಾಗಿ ಮಾಡಿಕೊಳ್ಳಬಹುದು.



# ೯. ತಾಳಮೇಳ

ನಾವೆಲ್ಲರೂ ಏನೋ ಒಂದನ್ನು ಹುಡುಕುತ್ತಿದ್ದೇವೆ. ಅದು ಸಿಕ್ಕುವವರೆಗೂ ನಮಗೆ ತೃಪ್ತಿಯಿಲ್ಲ. ನಾವು ಏನನ್ನು ಹುಡುಕುತ್ತಿದೇವೆ ಎಂಬುದು ನಮ್ಮಲ್ಲನೇಕರಿಗೆ ತಿಳಿದಿರುವದಿಲ್ಲ. ಧನ, ಅಧಿಕಾರ, ಕೀರ್ತಿ, ಸಂತತಿ, ಆಯುಸ್ಸು, ಆರೋಗ್ಯ - ಮುಂತಾದವುಗಳಲ್ಲಿ ಒಂದೊಂದನ್ನೊ ನಾವು ಹುಡುಕುತ್ತಿದ್ದೇವೆಂಬುದು ನಮ್ಮಗಳ ಭಾವನೆ.

ನಿಜವಾಗಿ ನಾವು ಹುಡುಕುತ್ತಿರುವದು ಜೀವನದಲ್ಲಿ ತಾಳಮೇಳ ವಿರಲೆಂದು. ನಮ್ಮ ಜೀವನದಲ್ಲಿ ತಾಳಮೇಳವು ಕಾಣುವದಿಲ್ಲ. ಅದನ್ನು ಧನದಿಂದಲೋ, ಅಧಿಕಾರದಿಂದಲೋ, ಕೀರ್ತಿಯಿಂದಲೋ, ಪ್ರಜಾಸಂತತಿ ಯಿಂದಲೋ ಅಥವಾ ಮತ್ತೆ ಯಾವದಾದರೊಂದರಿಂದಲೋ ದೊರಕಿಸಿ ಕೊಳ್ಳಬೇಕೆಂದು ಹವಣಿಸುತ್ತಿರುವೆವು. ಧನಾದಿಗಳು ಧನಾದಿಗಳಿಗಾಗಿಯೇ ಬೇಡ; ಜೀವನದಲ್ಲಿ ತಾಳಮೇಳವಿರುವದಕ್ಕೇ ಅವು ಬೇಕಾಗಿವೆ.

ಮನುಷ್ಯನು ಜೀವನದ ಕೇಂದ್ರವನ್ನು ಬಿಟ್ಟು ಮನಬಂದಂತೆ ನಡೆಯುತ್ತಿದ್ದಾನೆ. ಅವನ ಜೀವನದಲ್ಲಿ ತಾಳಮೇಳವಿಲ್ಲದ್ದಕ್ಕೆ ತಾಳಮೇಳದ ಮೂಲನಾದ ಭಗವಂತನನ್ನು ಅನುಸರಿಸದಿರುವದೇ ಕಾರಣ. ಭಗವಂತನ ಆಧಾರದಿಂದಲೇ ಜೀವನವು ಸಾಗಿರುವದು ; ಜೀವನದಲ್ಲಿ ಹೊಂದಿಕೆಯಿದೆ, ತಾಳವಿದೆ, ಮೇಳವಿದೆ, ನಮ್ಮ ಜೀವನದಲ್ಲಿ ಎಷ್ಟೇ ಅವ್ಯವಸ್ಥೆ ತೋರಲಿ, ಭಗವಂತನ ವ್ಯವಸ್ಥೆಯು ಈಗಲೂ ಇದೆ. ಜೀವನವು ಭೂಕೈಲಾಸವೇ. ಇದರಲ್ಲಿ ಇಂಪಾದ ಗಾನವಿದೆ, ತಾಳಮದ್ದಳೆಗಳು ವ್ಯವಸ್ಥೆಯಿಂದ ಬಾಜಿಸುತ್ತಿವೆ ; ನಟರಾಜನಾದ ಪರಶಿವನ ನರ್ತನವಿದೆ. ನಾವು ಈ ತಾಳಮೇಳದ ಜೀವನಕ್ಕೆ ಹೊಂದಿಕೊಳ್ಳಬೇಕು; ನಮ್ಮ ಕೇಂದ್ರವಾಗಿರುವ ಭಗವಂತನಲ್ಲಿಗೆ ಹಿಂತಿರುಗಬೇಕು. ಅಷ್ಟೆ. ಕೂಡಲೆ ಜೀವನವು ಸುಖಮಯವಾಗುವದು.

❀❀❀

# ೧೦. ಅಂತಃಕರಣ

ಹೊರಗಿನ ವಿಷಯಗಳನ್ನು ನೋಡುವದಕ್ಕೆ ನಮಗೆ ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ - ಇವುಗಳಲ್ಲಿ ಕೆಲಸಮಾಡುವ 'ಇಂದ್ರಿಯಗಳು' ಸಾಧನವಾಗಿವೆ. ಇಂದ್ರಿಯಗಳು ಈ ಕಣ್ಣು ಮುಂತಾದ ಸ್ಥಾನಗಳಿಗಿಂತ ಬೇರೆಯಾಗಿವೆ; ಅವೇ ಹೊರಗಿನ ವಸ್ತುಗಳ ರೂಪ, ಶಬ್ದ, ವಾಸನೆ, ಸವಿ ಮುಂತಾದವುಗಳನ್ನು ನಮಗೆ ತಿಳಿಸುವವು. ಇವುಗಳ ವರದಿಯನ್ನು ರಿಜಿಸ್ಟರು ಮಾಡಿಕೊಳ್ಳುವ 'ಮನಸ್ಸು' ಇದೆ. ಇದನ್ನು **ಅಂತಃಕರಣ** ಎಂದು ವೇದಾಂತಿಗಳು ಕರೆಯುತ್ತಾರೆ.

ಅಂತಃಕರಣವು ಒಳಗೆ ಇರುವದರಿಂದ ಮಾತ್ರವೇ ಅಂತಃಕರಣ ಎನಿಸಿಲ್ಲ. ಅದು ಹೊರಗಿನ ವಿಷಯಗಳನ್ನು ಅರಿತು ಅವುಗಳ ವಿಷಯದಲ್ಲಿ ಮನನ ಮಾಡುವದಲ್ಲದೆ, ಒಳಗೂ ವೇದನೆಗಳನ್ನೂ ಸುಖದುಃಖಗಳನ್ನೂ ಅರಿಯುತ್ತಿರುವದು. ಅಂತಃಕರಣವು ಒಳ್ಳೆಯ ಆಲೋಚನೆಗಳನ್ನೂ ಮಾಡಬಲ್ಲದು, ಕೆಟ್ಟ ಆಲೋಚನೆಗಳನ್ನೂ ಮಾಡಬಲ್ಲದು. ವಿಧಿಮುಖವಾಗಿ ಗೆಲವು, ಲಾಭ, ಅಭಿವೃದ್ಧಿ, ಆರೋಗ್ಯ, ಸುಖ, ಪ್ರೇಮ, ಆತ್ಮವಿಶ್ವಾಸ - ಮುಂತಾದ ರೂಪದ ಯೋಚನೆಗಳನ್ನು ತುಂಬಿಕೊಳ್ಳಬಲ್ಲದು; ನಿಷೇಧ ರೂಪವಾಗಿ ಸೋಲು, ನಷ್ಟ, ಹೀನಸ್ಥಿತಿಗೆ ಇಳಿಯುವದು, ರೋಗ, ದುಃಖ, ಹಗೆತನ, ಕಳವಳ - ಮುಂತಾದ ರೂಪದ ಯೋಚನೆಗಳನ್ನೂ ಮಾಡಬಲ್ಲದು. ವಿಧಿ ಮುಖವಾದ ಯೋಚನೆಗಳಿಂದ ಅಂತಃಕರಣದ ಶಕ್ತಿಯು ಬಲಪಡುವದು; ನಿಷೇಧಮುಖವಾದ ಯೋಚನೆಗಳಿಂದ ಅದರ ಶಕ್ತಿಯು ಕುಗ್ಗುವದು.

ಆದರೆ ಅಂತಃಕರಣಕ್ಕೆ ಮುಖ್ಯವಾಗಿ ಬರುವ ಶಕ್ತಿಯೆಲ್ಲ ಅದರೊಳಗೇ ಇದ್ದುಕೊಂಡಿರುವ ಭಗವಂತನಿಂದ. ಭಗವಂತನಲ್ಲಿಟ್ಟ ಅಂತಃಕರಣವೇ ನಿಜವಾದ ಅಂತಃಕರಣವು.



# ೧೧. ನಮ್ಮೊಳಗಿರುವ ಮದ್ದಿನ ಮನೆ

ಮನಸ್ಸೆಂಬುದೊಂದು ಭಾರಿಯ ಮದ್ದಿನ ಮನೆ. ಅದಕ್ಕೆ ಇರುವ ಶಕ್ತಿಗಳ ವಿಷಯದಲ್ಲಿ ನಾವು ಬಹಳ ಎಚ್ಚರಿಕೆಯಿಂದಿರಬೇಕು. ಮನಸ್ಸಿಗೆ ಬೇಕಾದಂಥ ಶಕ್ತಿಗಳುಂಟಾಗುವವು ಎಂದು ಅನೇಕರು ಬೋಧಿಸುತ್ತಾರೆ. ಅದಕ್ಕೆ ಇರುವ ಶಕ್ತಿಗಳು ಆಟಂಬಾಂಬ್, ಹೈಡ್ರೋಜನ್ ಬಾಂಬ್ - ಮುಂತಾದವುಗಳ ಶಕ್ತಿಗಳಿಗಿಂತಲೂ ಪ್ರಬಲವಾದವು - ಎಂಬ ಎಚ್ಚರಿಕೆಯನ್ನು ಕೊಡುವವರು ವಿವರಳ.

ಮನಸ್ಸಿನ ಶಕ್ತಿಗಳನ್ನು ದುರುಪಯೋಗಮಾಡುವ ಅಜ್ಞರು ಬಹು ಮಂದಿ ಇರುತ್ತಾರೆ. ಮನಸ್ಸಿನ ಶಕ್ತಿಗಳನ್ನು ಉಪಯೋಗಿಸಿಕೊಂಡು ಮತ್ತೊಬ್ಬರನ್ನು ವಶಗೊಳಿಸಿಕೊಳ್ಳುವದಕ್ಕೆ , ಹಣವನ್ನು ಗಳಿಸುವದಕ್ಕೆ, ಅಧಿಕಾರವನ್ನು ಸಂಪಾದಿಸುವದಕ್ಕೆ ಅಥವಾ ತನ್ನ ಕೀರ್ತಿಯನ್ನು ಹಬ್ಬಿಸುವದಕ್ಕೆ ಉಪಯೋಗಿಸುವವರು ಜಗತ್ತಿನ ಕ್ಷಯಕ್ಕೆ ಕಾರಣರಾಗುವರು. ಅವರಿಗೂ ಅದರಿಂದ ಕೊನೆಯಲ್ಲಿ ಕೇಡೇ ಆಗುವದು. ಆದರೆ ಪ್ರೇಮಪೂರಿತರಾಗಿ ಜಗತ್ತಿನಕಲ್ಯಾಣಕ್ಕಾಗಿಯೂ ಈ ಶಕ್ತಿಗಳನ್ನು ಉಪಯೋಗಿಸಬಹುದಾಗಿದೆ. ಹಾಗೆ ಉಪಯೋಗಿಸುವವರು ಕಾಲದಲ್ಲಿ ಮಳೆಗರೆಯುವ ಪರ್ಜನ್ಯನಂತೆ ತಾವೂ ಹಗುರವಾಗಿ ಆನಂದಜೀವನವನ್ನು ಸಾಗಿಸಿಕೊಳ್ಳುತ್ತಾರೆ, ಮಾನವ ವರ್ಗದ ಚಿರಕೃತಜ್ಞತೆಗೂ ಪಾತ್ರರಾಗುತ್ತಾರೆ.

ನಿಮ್ಮ ಅಂತಃಕರಣದ ಶಕ್ತಿಗಳು ನಿಮಗೂ ನಿಮ್ಮ ನೆರೆಯವರಿಗೂ ಯಾವಾಗಲೂ ಕಲ್ಯಾಣಕಾರಕವಾಗಿಯೇ ಇರಬೇಕೆ? ಹಾಗಾದರೆ ಕಲ್ಯಾಣ ಶಕ್ತಿಗಳ ಮೂಲನಾಗಿರುವ ಭಗವಂತನೆಂಬ ಕೇಂದ್ರವನ್ನು ನಿಮ್ಮ ಹೃದಯದಲ್ಲಿ ಕಂಡುಕೊಳ್ಳಿರಿ.



# ೧೨. ಬುದ್ಧಿವೃತ್ತಿಗಳ ಬೆಳಕು

ಅಂತಃಕರಣಕ್ಕೆ ಮನಸ್ಸು, ಬುದ್ಧಿ - ಎಂಬ ಎರಡು ಹೆಸರುಗಳು ಬೇರೆಬೇರೆ ಇರುತ್ತವೆ. ಇಂದ್ರಿಯಗಳ ಮೂಲಕವಾಗಿ ನಮಗೆ ಬರುವ ತಿಳಿವಳಿಕೆಗಳನ್ನು ಇಂಥದ್ದು, ಅಂಥದ್ದು - ಎಂದು ಬೇರೆಬೇರೆಯಾಗಿ ವಿಕಲ್ಪಿಸುವ ಕೆಲಸವನ್ನು ಮಾಡುವಾಗ ಅದಕ್ಕೆ **ಮನಸ್ಸು** ಎಂದು ಹೆಸರು. ಈ ವಿಕಲ್ಪಗಳನ್ನು ಒಟ್ಟುಗೂಡಿಸಿ ಇಂಥ ವಸ್ತು, ಇಂಥ ವೇದನೆ - ಎಂದು ನಿರ್ಣಯಿಸುವ ಕೆಲಸವನ್ನು ಮಾಡುವಾಗ ಅದಕ್ಕೇ **ಬುದ್ಧಿ** ಎಂದು ಹೆಸರು.

ಅಂತಃಕರಣವು ವಿಷಯಗಳನ್ನು ಅರಿಯುವದು, ನಿರ್ಣಯಿಸುವದು - ಈ ಕೆಲಸಗಳನ್ನು ಮಾತ್ರ ಬಿಡುವದಿಲ್ಲ. ಹೀಗೆ ಮಾಡುವೆನು, ಇದು ಒಳ್ಳೆಯದು ಎಂದು ಸಂಕಲ್ಪಿಸುವದೂ ಅದರ ಕೆಲಸ; ಇಂಥದ್ದನ್ನೇ ನಾನು ಮಾಡುವೆನು - ಎಂದು ನಿಶ್ಚಯಿಸುವದೂ ಅದರ ಕೆಲಸವೇ. ವ್ಯವಹಾರದಲ್ಲಿ ಹೀಗೆಯೇ ನಡೆಯುವೆನು - ಎಂದು ನಿಶ್ಚಯಿಸುವಾಗಲೂ ಅದಕ್ಕೆ **ಬುದ್ಧಿ** ಎಂದೇ ಹೆಸರು.

ನಮ್ಮ ಅಂತಃಕರಣದಲ್ಲಿ ಬಗೆಬಗೆಯ ಸಂಕಲ್ಪಗಳೂ ನಿಶ್ಚಯಗಳೂ ಆಗುತ್ತಿರುವವು. ಇವುಗಳನ್ನು ವೃತ್ತಿಗಳು - ಎಂದು ವೇದಾಂತಿಗಳು ಕರೆಯುತ್ತಾರೆ. ವೃತ್ತಿಗಳು ನಮ್ಮ ಸ್ವಭಾವಕ್ಕೂ ಹೊರಗಿನ ಸಂನಿವೇಶಕ್ಕೂ ತಕ್ಕಂತೆ ಎದ್ದುಕೊಳ್ಳುತ್ತಿರುವವು. ಆದರೆ ಒಳ್ಳೆಯ ವೃತ್ತಿಗಳೇ ಎದ್ದುಕೊಳ್ಳುವಂತೆ ಮಾಡಿಕೊಳ್ಳುವದೂ ಶಕ್ಯವಿದೆ. ಈ ಪ್ರಯತ್ನಕ್ಕೆ ಬೆಳಕು ನಮ್ಮೊಳಗೆ ಇದ್ದುಕೊಂಡಿರುವ ಭಗವಂತನಿಂದಲೇ ದೊರಕುತ್ತದೆ. ನಿಮ್ಮಲ್ಲಿ ಶುಭ ವೃತ್ತಿಗಳೇ ಉಂಟಾಗುವಂತೆ ಭಗವಂತನನ್ನು ಪ್ರಾರ್ಥಿಸಿಕೊಳ್ಳಿರಿ. ಈ ಪ್ರಾರ್ಥನೆಯಿಂದ ನಿಮ್ಮ ಅಂತಃಕರಣದಲ್ಲಾಗುವ ಮಾರ್ಪಾಡನ್ನು ಕಂಡಾಗ ನಿಮಗೇ ಆಶ್ಚರ್ಯವಾಗುವದು.



# ೧೩. ಮೋಡಗಳ ಮೇಲೆ

ಮೋಡಗಳು ವಾಯುಮಂಡಲದಲ್ಲಿ ಹರಿದಾಡುತ್ತಿರುತ್ತವೆ. ಕಾರ್ಮೋಡಗಳು ನಮ್ಮ ತಲೆಯ ಮೇಲುಗಡೆಯಲ್ಲಿ ಆಕಾಶದಲ್ಲಿ ತೇಲಾಡುತ್ತಿರುವಾಗ 'ಇನ್ನೇನು ಮಳೆ ಬರುತ್ತದೆ, ಬಟ್ಟೆಗಳು ತೊಯ್ದು ಹೋದಾವು, ಕೈಯಲ್ಲಿ ಕೊಡೆಯಿಲ್ಲ, ಆದ್ದರಿಂದ ಯಾವದಾದರೊಂದು ಮನೆಯೊಳಗೆ ಸೇರಿಕೊಳ್ಳಬೇಕು' ಎನಿಸುತ್ತದೆ, ಅಲ್ಲವೆ? ಹೀಗೆಯೇ ನಮ್ಮ ಮನಸ್ಸಿನಲ್ಲಿ ಅಶುಭಸಂಕಲ್ಪಗಳ ಮೋಡಗಳು ಆಗಾಗ್ಗೆ ಎದ್ದುಕೊಂಡು ಅಲೆದಾಡುತ್ತಿರುವವು. 'ಅವು ಈಗಲೋ, ಇನ್ನು ಸ್ವಲ್ಪ - ಹೊತ್ತಿನೊಳಗಾಗಿಯೋ ದುಃಖದ ಮಳೆಯನ್ನು ಕರೆಯಬಹುದು'- ಎಂದು ನಮಗೆ ಅನ್ನಿಸುತ್ತಿರುತ್ತದೆ. ಅವುಗಳಿಂದ ತಪ್ಪಿಸಿಕೊಂಡು ಎಲ್ಲಿಯಾದರೂ ಹಾಯಾಗಿರಬೇಕೆಂಬುದು ನಮ್ಮಗಳ ಆಶೆ. ಆದರೆ ನಮ್ಮ ಚಿತ್ತಾಕಾಶವೇ ಎಲ್ಲೆಲ್ಲಿಯೂ ಇರುತ್ತದೆ; ಈ ಅಶುಭಸಂಕಲ್ಪದ ಮೋಡಗಳೇ ಎಲ್ಲೆಲ್ಲಿಯೂ ಕಾಣಿಸಿಕೊಳ್ಳುತ್ತಿರುತ್ತವೆ.

ಮೊಡಗಳು ಇಂತಿಷ್ಟು ಎತ್ತರದಲ್ಲಿವೆ ಎಂದು ಗೊತ್ತುಮಾಡಿಕೊಳ್ಳಬಹುದು. ಒಂದುವೇಳೆ ನಮಗೆ ಆ ಎತ್ತರವನ್ನು ದಾಟಿ ಮೇಲಕ್ಕೆ ಹೋಗುವಷ್ಟು ಶಕ್ತಿಯ ರೆಕ್ಕೆಗಳಿದ್ದರೆ? ಆಗ ನಮಗೆ ಮೋಡಗಳ ಭಯವಿರುತ್ತಿತ್ತೆ? ಎಂದಿಗೂ ಇಲ್ಲ. ಇದರಂತೆ ಈ ಸಂಕಲ್ಪಮೇಘಗಳ ಮೇಲುಗಡೆಗೆ ಸಚ್ಚಿದಾನಂದರೂಪನಾದ ಪರಮಾತ್ಮನು ಇರುತ್ತಾನೆ. ಅವನನ್ನು ಮುಟ್ಟಿದರೆ ಈ ಮೋಡಗಳ ಅಂಜಿಕೆಯೇ ಇರುವದಿಲ್ಲ. ಅವನನ್ನು ಮುಟ್ಟುವದಕ್ಕೆ ಭಗವತ್ಪ್ರಾರ್ಥನೆಗಳೆಂಬ ರೆಕ್ಕೆಗಳನ್ನು ಸಂಪಾದಿಸಿಕೊಳ್ಳಿರಿ. ಆಮೇಲೆ ಎಂಥ ಕಾರ್ಮೋಡಗಳು ಎದ್ದುಕೊಂಡರೆತಾನೆ ಏನು?



# ೧೪. ಚಿಂತೆಯನ್ನು ತಪ್ಪಿಸಿಕೊಳ್ಳುವ ಉಪಾಯ

'ಏನಾದರು ಚಿಂತೆ ಜೀವಕ್ಕೆ' ಎಂದು ದಾಸರು ಹಾಡಿರುತ್ತಾರೆ. ಆಶಾಭಂಗ, ನಿರಾಶೆ, ಭಯ, ದ್ವೇಷ , ಅಸೂಯೆ, ಅತೃಪ್ತಿ, ಸೇಡುತೀರಿಸಿಕೊಳ್ಳುವ ಸಂಕಲ್ಪ - ಮುಂತಾದ ಬಗೆಬಗೆಯ ನಿಮಿತ್ತಗಳಿಂದ ಮನಸ್ಸಿನಲ್ಲಿ ಏನಾದರೊಂದು ಚಿಂತೆಯು ಉಂಟಾಗುತ್ತಿರುತ್ತದೆ. ಚಿಂತೆಯೇ ಮುಪ್ಪು, ಸಂತೋಷವೇ ಯೌವನ - ಎಂದು ಹಿರಿಯರು ಹಾಡುತ್ತಿದ್ದರು. ಚಿಂತೆಯಿಂದ ಹಲವು ಬಗೆಯ ರೋಗಗಳು ಉಂಟಾಗುವವೆಂದು ಈಗ ವೈಜ್ಞಾನಿಕರು ಅಭಿಪ್ರಾಯಪಡುತ್ತಿದ್ದಾರೆ. ಅನಿಶ್ಚಿತಮನೋಭಾವವೂ, ತಮ್ಮ ಕಷ್ಟವನ್ನು ಮತ್ತೊಬ್ಬರಲ್ಲಿ ಹೇಳಿಕೊಳ್ಳದಿರುವದೂ - ಮನಸ್ಸಿನ ಕೊರಗು ಬೆಳೆಯುವದಕ್ಕೆ ಕಾರಣವೆಂದೂ ಅವರು ಹೇಳುತ್ತಿದ್ದಾರೆ.

ಈ ಬುದ್ಧಿವಾದಕ್ಕೆ ನಾವೆಲ್ಲರೂ ಕೂಡಲೆ ಕಿವಿಗೊಡುವದು ಒಳ್ಳೆಯದು. ಅಧ್ಯಾತ್ಮಮಾರ್ಗಕ್ಕೆ ಒಂದಲ್ಲ ಒಂದುದಿನ ನಾವೆಲ್ಲರೂ ತಿರುಗಲೇಬೇಕಾಗಿದೆ. ಹೀಗಿರುವಾಗ ಈಗಲೆ ತಿರುಗಲೊ, ಸ್ವಲ್ಪ ತಡೆಯಲೊ? - ಎಂಬ ಅನಿಶ್ಚಿತಭಾವವು ಏತಕ್ಕೆ? ಇಂದೇ ಭಗವಂತನ ಕಡೆಗೆ ತಿರುಗಿರಿ. ಆತನಲ್ಲಿ ನಿಮ್ಮ ಮನಸ್ಸಿನ ಚಿಂತೆಯನ್ನು ತೋಡಿಕೊಳ್ಳಿರಿ. ಅಥವಾ ಇದಕ್ಕಿಂತಲೂ ಹೆಚ್ಚಿನ ಇನ್ನೂ ಒಂದು ಉತ್ತಮವಾದ ಉಪಾಯವಿದೆ. ಚಿಂತೆಯ ಚಿಂತೆಯನ್ನೇ ಕಳೆಯುವ ಭಗವಚ್ಚಿಂತನವನ್ನು ಈಗಲೇ ಪ್ರಾರಂಭಿಸಿಬಿಡಿರಿ!



## ೧೫. ಕಷ್ಟಗಳನ್ನೆಲ್ಲ ಗೆದ್ದುಕೊಳ್ಳಬಹುದು

ಜೀವನದಲ್ಲಿ ಕಷ್ಟಗಳು ಬರಲೇಬಾರದೆಂದರೆ ಆಗಲಾರದು. ಕಷ್ಟಗಳು ಬರುವದು ಸ್ವಾಭಾವಿಕ ಇದಲ್ಲದೆ ಕಷ್ಟಗಳಿಂದ ನಮಗೆ ಬಗೆಬಗೆಯ ಅನುಭವಗಳಾಗಿ ವ್ಯವಹಾರಜ್ಞಾನವಾಗುವದರಿಂದ ಅವುಗಳು ಬರಲೇ ಬಾರದೆಂದು ಬಯಸುವದು ಯುಕ್ತವೂ ಅಲ್ಲ.

ಆದರೆ ಎಂಥ ಕಷ್ಟವೇ ಆಗಲಿ, ಅದನ್ನು ನಾವು ವಶಗೊಳಿಸಿಕೊಳ್ಳುವದು ಸಾಧ್ಯ. ಕಷ್ಟಗಳನ್ನು ಎದುರಿಸಿ ತಪ್ಪಿಸಿಕೊಳ್ಳುವೆನೆಂಬ ಹುಚ್ಚು ಬೇಡ ಕಷ್ಟವನ್ನು ಸಹಿಸಿಕೊಂಡು, ಅವುಗಳನ್ನೇ ಸುಖಕ್ಕೆ ಹೆಬ್ಬಾಗಿಲಾಗಿ ಮಾಡಿಕೊಳ್ಳುವೆನೆಂಬ ಇಚ್ಛೆ ಇರಲಿ.

ಕಷ್ಟಗಳಿಗೆ ಬಲುಮಟ್ಟಿಗೆ ನಮ್ಮ ಮನಸ್ಸಿನಲ್ಲಿರುವ ಅಶುಭಸಂಕಲ್ಪ ಗಳೇ ಕಾರಣವಾಗಿರುತ್ತವೆ. ನಮ್ಮ ಮನಸ್ಸಿನ ಈ ಕೆಟ್ಟಸಂಕಲ್ಪಗಳನ್ನು ಪರಿಹರಿಸಿಕೊಳ್ಳದೆ ಮೇಲೆಮೇಲೆಯೇ ಕಷ್ಟಪರಿಹಾರಕ್ಕೆ ಉಪಾಯವನ್ನು ಹುಡುಕುತ್ತಿರುವವರಿಗೆ ಒಂದು ಕಷ್ಟವು ಹೋದರೆ ಮತ್ತೊಂದು ಕಡುತರವಾದ ಕಷ್ಟವು ಭೇಟಿಕೊಡುವದು.

ಕಷ್ಟಪರಂಪರೆಯೆಲ್ಲ ಹೋಗಬೇಕೆ? ಕಷ್ಟಗಳು ಯಾವವೂ ನಿಮ್ಮನ್ನು ಗೋಳುಗುಟ್ಟಿಸದೆ ಆನಂದಜೀವನದ ಹಾದಿಯಲ್ಲಿಯೇ ಬಿಡಬೇಕೆ? ಹಾಗಾದರೆ ಶಿವಸಂಕಲ್ಪಗಳನ್ನು ಮಾಡಿರಿ ; ಶಿವಸಂಕಲ್ಪಗಳಿಗೆ ಕಾರಣನಾದ ಭಗವಂತನನ್ನೇ ಚಿಂತಿಸುತ್ತಿರಿ.

❀❀❀

# ೧೬. ಸಂಪದಭಿವೃದ್ಧಿ

ಒಂದು ಕುಟುಂಬದ ಸಂಪದಭಿವೃದ್ಧಿಗೆ ಕುಟುಂಬದಲ್ಲಿರುವವರೆಲ್ಲರ ದುಡಿಮೆಯು ಕಾರಣವಾಗಿರುತ್ತದೆ. ಒಂದು ದೇಶದ ಸಂಪದಭಿವೃದ್ಧಿಗೆ ಆ ದೇಶದ ನಿವಾಸಿಗಳೆಲ್ಲರ ದಡಿಮೆಯು ಕಾರಣವಾಗಿರುತ್ತದೆ. ಭರತಖಂಡದ ಸಂಪತ್ತು ಅಭಿವೃದ್ಧಿಯಾಗುವದಕ್ಕೆ ನೀವೇನು ಪ್ರಯತ್ನವನ್ನು ನಡೆಯಿಸುತ್ತಿರುವಿರಿ?

ಸಂಪತ್ತೆಂದರೆ ಆರ್ಥಿಕಸಂಪತ್ತು ಎಂದು ಬಹುಜನರ ಭಾವನೆಯಿದೆ. ಜನರು ಉದ್ಯೋಗಶೀಲರಾಗುವದು, ಕೈಗಾರಿಕೆಗಳು ಹೆಚ್ಚಾಗಿರುವದು, ಕೃಷಿ ವಾಣಿಜ್ಯಗಳು ಪ್ರಬಲವಾಗುತ್ತಿರುವದು, ಭೂಜಲವ್ಯೋಮಾಮರ್ಗಗಳಲ್ಲಿ ಯಾನಗಳು ಸಂಚರಿಸುವ ಅನುಕೂಲ್ಯವಿರುವದು, ಬಲಿಷ್ಟವಾದ ಸೈನ್ಯದ ರಕ್ಷಣೆಯಿರುವದು, ಓದುಬರಹಗಳು ಎಲ್ಲರಿಗೂ ನಿಲುಕಿರುವದು; ಆಯು-ರಾರೋಗ್ಯಗಳು ಉತ್ತಮಸ್ಥಿತಿಯಲ್ಲಿರುವದು - ಇವೇ ಮುಂತಾದವುಗಳನ್ನು ನಮ್ಮಲ್ಲನೇಕರು ಸಂಪದಭಿವೃದ್ಧಿಯಲ್ಲಿ ಸೇರಿಸಿರುತ್ತೇವೆ. ಇದು ಯುಕ್ತವೂ ಆಗಿದೆ.

ಆದರೆ ಈ ಬಾಹ್ಯಸಂಪತ್ತು ಏತರಿಂದ ನಮಗೆ ಬರಬೇಕು? 'ಯೇನ ಕೇನಾಪ್ಯುಪಾಯೇನ' ಯಾವದಾದರೊಂದು ಮಾರ್ಗದಿಂದ, ಮತ್ತೊಬ್ಬರಿಗೆ ಮೋಸಮಾಡಿ ಹೊಡೆದುಬಡಿದಾದರೂ, ಸಂಪಾದಿಸಿದ್ದು ನಿಜವಾದ ಸಂಪತ್ತಾದೀತೆ? ಅದರ ಅಭಿವೃದ್ಧಿಯು ಸಂಪದಭಿವೃದ್ಧಿಯೆನಿಸಿಕೊಂಡೀತೆ?

ಹೊರಗಿನ ಸಂಪತ್ತು ಒಳಗಿನ ದೈವೀಸಂಪತ್ತಿನಿಂದಾದರೂ ಬರಬಹುದು. ಒಳಗಿನ ಆಸುರೀಸಂಪತ್ತಿನಿಂದಾದರೂ ಬರಬಹುದು. ದೈವೀ ಸಂಪತ್ತಿನಿಂದ ಸ್ವಾತಂತ್ರ್ಯದ ಸುಖವುಂಟು; ಆದರೆ ಆಸುರೀಸಂಪತ್ತಿನಿಂದ ಬಂಧವೇ ಆಗುವದು.



# ೧೭. ದುಃಖನಿವಾರಣೆಗೆ ಎರಡು ಮಾರ್ಗಗಳು

ನಮಗೆ ದುಃಖಗಳು ಬೇರೆಬೇರೆಯ ಕಾರಣದಿಂದ ಬರುತ್ತಿರುವಂತೆ ಕಾಣುವವು. ಈಗ ಯಾವ ಕೆಲಸವೂ ಇಲ್ಲ; ಅದಕ್ಕಾಗಿ ಉದ್ಯೋಗ ಪ್ರಾಪ್ತಿಗಾಗಿ ಹವಣಿಸಬೇಕು. ಆಮೇಲೆ ಸಂಬಳ ಸಾಲದು; ಬಡತಿ ಹಣಕ್ಕಾಗಿ ಪ್ರಯತ್ನಿಸಬೇಕು. ಇಷ್ಟರಲ್ಲಿ ಮಕ್ಕಳಿಲ್ಲವೆಂಬ ಕೊರಗು ; ಆಗ ಪುತ್ರ ಪ್ರಾಪ್ತಿಗಾಗಿ ಪ್ರಯತ್ನ. ಇನ್ನು ಮಕ್ಕಳ ವಿದ್ಯಾಭ್ಯಾಸ; ಆಗ ಊರನ್ನು ಬಿಟ್ಟು ನಗರಕ್ಕೆ ಹೋಗಬೇಕು. ಆ ಬಳಿಕ ರೋಗನಿವಾರಣೆಯಾಗಬೇಕು. ಇತ್ಯಾದಿ. ಇತ್ಯಾದಿ!

ಈ ದುಃಖವನ್ನು ನಿವಾರಿಸುವದಕ್ಕೆ ನಮ್ಮ ನಮ್ಮ ಬುದ್ಧಿಶಕ್ತಿಯನ್ನು ಉಪಯೋಗಿಸುವದು ಒಂದು ಮಾರ್ಗ. ದುಃಖಗಳನ್ನು ಒಂದೊಂದಾಗಿ ಪರಿಹರಿಸುತ್ತಾ ಇರುವವರೇ ಬಹಳ. ಈ ಪರಿಹಾರೋಪಾಯವು ಕೈಗೂಡಿದರೂ ಮತ್ತೆ ಮತ್ತೆ ದುಃಖಗಳು ರೂಪಾಂತರದಲ್ಲಿ ಬರುತ್ತಲೇ ಇರಬಹುದು. ಸುಂಕದಕಟ್ಟೆಯನು ತಪ್ಪಿಸಿಕೊಳ್ಳಬೇಕೆಂದು ರಾತ್ರಿ ಸರಿ ಹೊತ್ತಿನಲ್ಲಿಯೇ ಹೊರಟವನೊಬ್ಬನ ಬಂಡಿಯು ಅವನಿಗೆ ನಿದ್ರೆಹತ್ತಿರಲು ಬೆಳಗಿನಜಾವಕ್ಕೆ ಸರಿಯಾಗಿ ಅದೇ ಸುಂಕದಕಟ್ಟೆಯ ಬಳಿಗೆ ಬಂದು ನಿಂತಿತ್ತಂತೆ ! ಬಂಡಿಯ ಎತ್ತುಗಳಿಗೆ ಸುಂಕದಕಟ್ಟೆಯ ಬಳಿ ನಿಲ್ಲುವ ಹವ್ಯಾಸವಾಗಿಬಿಟ್ಟಿತ್ತು.

ನಮ್ಮ ಪ್ರಯತ್ನವನ್ನೆಲ್ಲ ಭಗವತ್ಪ್ರಾಪ್ತಿಗೆಂದು ವಿನಿಯೋಗಿಸುವದು ಇನ್ನೊಂದು ಮಾರ್ಗ. ನಮ್ಮ ಭಾವಗಳನ್ನು ಶುಭಸಂಕಲ್ಪಗಳ ರೂಪಕ್ಕೆ ತಿರುಗಿಸಿಕೊಂಡು ಅದನ್ನೇ ಮತ್ತೆ ಮತ್ತೆ ಆವೃತ್ತಿಮಾಡಬೇಕು. ಆಗ ನಮಗೆ ಆನಂದರೂಪನಾದ ಪರಮಾತ್ಮನ ಸಂಸ್ಪರ್ಶವಾಗುವದು. ನಮ್ಮ ಜೀವನವೆಲ್ಲವೂ ಸುಖಮಯವಾಗುವದು.

❀❀❀

# ೧೮. ದೇವರಲ್ಲಿ ಬೇಡತಕ್ಕದ್ದು

ದೇವರ ಪ್ರಾರ್ಥನೆ ಎಂದರೇನು? ಇದು ಅನೇಕರಿಗೆ ತಿಳಿಯದೆ ಇದೆ. ಸಾಮಾನ್ಯರು ದೇವರಿಗೆ ಹರಕೆಹಾಕಿಕೊಳ್ಳುತ್ತಾರೆ. 'ದೇವ, ಇಂಥದ್ದೊಂದು ವಸ್ತುವಿನಪ್ರಾಪ್ತಿಯು ನನಗೆ ಆಗುವಂತೆ ಮಾಡು, ನಿನಗೆ ಹಣ್ಣುಕಾಯಿ ಒಪ್ಪಿಸುತ್ತೇನೆ. ದೇವ, ಇಂಥದ್ದೊಂದು ತೊಂದರೆಯನ್ನು ತಪ್ಪಿಸು, ನಿನಗೆ ಅಭಿಷೇಕನೈವೇದ್ಯಗಳನ್ನು ಮಾಡಿಸುತ್ತೇನೆ'. ಇದು ತೀರ ಕೆಳಮಟ್ಟದವರ ಪ್ರಾರ್ಥನೆ. ಆದರೆ ದೇವರಿಗೆ ಹಣ್ಣುಕಾಯಿಗಳ ಕೊರತೆಯಿದೆ ಯೆನುವದಕ್ಕಾಗುವದಿಲ್ಲ, ಅನ್ನನೀರುಗಳ ಅಭಾವವೂ ಇರುವದೆನ್ನಲಾಗದು - ಎಂದು ಬಲ್ಲವರು ಮತ್ತೆ ಕೆಲವರು. ಅವರು 'ದೇವ, ನೀನೇ ಸೃಷ್ಟಿಸಿರುವ ಜೀವನು ನಾನು. ನನ್ನ ಯೋಗಕ್ಷೇಮವು ನಿನ್ನದಲ್ಲವೆ? ನನ್ನನ್ನು ದುಃಖದಿಂದ ಪಾರುಮಾಡಿ, ಸುಖದ ಹಾದಿ ಹತ್ತಿಸು!' ಎಂದು ಬೇಡಿಕೊಳ್ಳುತ್ತಾರೆ. ದೇವರು ಪ್ರಕೃತಿಯ ನಿಯಮವನ್ನು ಬದಲಾಯಿಸಬಲ್ಲನೆಂದೋ, ಅಥವಾ ನಮ್ಮ ಪ್ರಾರ್ಥನೆಯಿಂದ ಅವನು ತನ್ನ ಮನಸ್ಸನ್ನು ಬದಲಾಯಿಸಿ ನಮಗೆ ಅನುಕೂಲವಾಗುವ ಸುತ್ತುವಳೆಯವನ್ನು ಕಲ್ಪಿಸುವನೆಂದೋ ಅವರ ಭಾವನೆ.

ಮತ್ತೂ ಕೆಲವರು 'ದೇವ, ಮತ್ತೊಬ್ಬರನ್ನು ಬೇಡದಂತೆ ಮಾಡು! ನನಗೆ ತೃಪ್ತಿಯನ್ನು ಕೊಡು!' ಎಂದು ಬೇಡಿಕೊಳ್ಳುತ್ತಾರೆ.

ಇವೆಲ್ಲ ಬೇರೆಬೇರೆಯ ಅಂತಸ್ತಿನ ಮನಸ್ಸಿಗೆ ಒಗ್ಗುವ ಪ್ರಾರ್ಥನೆಗಳು. ಆದರೆ ಮತ್ತೊಂದು ಬಗೆಯ ಪ್ರಾರ್ಥನೆಯುಂಟು. 'ಸಾಮಾನ್ಯರಿಗೆ ವಿಷಯಗಳಲ್ಲಿ ಯಾವ ಪ್ರೀತಿಯು ತಪ್ಪದೆ ಇರುವದೋ ಅಂಥ ಪ್ರೀತಿಯು ನಮಗೆ ಭಗವಂತನ ಸ್ಮರಣೆಯಲ್ಲಿರಬೇಕು' - ಎಂಬುದೇ ಅವರ ಪ್ರಾರ್ಥನೆ. ಈ ಪ್ರಾರ್ಥನೆಯಲ್ಲಿ ಅಡಕವಾಗದ ಬೇಡಿಕೆಯೇ ಇಲ್ಲ. ಸುಖಶಾಂತಿಗಳಿಗೆ ಇದೇ ಮಾರ್ಗ.



# ೧೯. ದ್ವಂದ್ವಗಳು

ದ್ವಂದ್ವಶಬ್ದಕ್ಕೆ ಅರ್ಥವೇನೆಂಬುದು ನಿಮಗೆ ಗೊತ್ತಿಲ್ಲದೆ ಇರಬಹುದು. ಆದರೆ ದ್ವಂದ್ವಗಳ ಅನುಭವವೇನೋ ನಿಮಗೆ ಇದ್ದೇ ಇದೆ. ಕೆಲವು ಪದಾರ್ಥಗಳಿವೆ. ಅವು ಒಂದಕ್ಕೊಂದು ಪ್ರತಿಪಕ್ಷವಾಗಿರುತ್ತವೆ. ಚಳಿ, ಸೆಕೆ ; ತೃಪ್ತಿ , ಹಸಿವು ; ಆರೋಗ್ಯ , ರೋಗ ; ಐಶ್ವರ್ಯ, ಬಡತನ ; ಶತ್ರು, ಮಿತ್ರ ; ಸ್ತುತಿ, ನಿಂದೆ ; ಆಹಾರಸಮೃದ್ಧಿ, ಕ್ಷಾಮ; ಆಳುತನ, ಅರಸುತನ; ಬದುಕು, ಸಾವು - ಇತ್ಯಾದಿ. ಇವುಗಳಲ್ಲಿ ಒಂದು ಮತ್ತೊಂದಕ್ಕೆ ಪ್ರತಿಪಕ್ಷ ವಾಗಿರುವದರಿಂದ ಇಂಥ ಜೋಡಿಯಾಗಿರುವ ಪದಾರ್ಥಗಳಿಗೆ ದ್ವಂದ್ವ ಗಳೆಂದು ಹೆಸರು.

ಹೊರಗಿನ ಪದಾರ್ಥಗಳೂ ದ್ವಂದ್ವಗಳೆನಿಸುತ್ತವೆ, ಅವುಗಳಿಂದಾಗುವ ವೇದನೆಗಳೂ ದ್ವಂದ್ವವೆನಿಸುತ್ತವೆ. ವೇದನೆಗಳು ಎಂದರೆ ಕಾಮ, ವೈರಾಗ್ಯ; ಸಿಟ್ಟು, ಸಮಾಧಾನ ; ಮಾನ, ಅಪಮಾನ - ಮುಂತಾದ ಭಾವಗಳು. ಹೊರಗಿನ ದ್ವಂದ್ವಗಳಿಂದ ಒಳಗೆ ವೇದನೆಗಳ ರೂಪದ ದ್ವಂದ್ವಗಳು ಎದ್ದುಕೊಳ್ಳುತ್ತವೆ; ಅವುಗಳಿಂದ ಸುಖದುಃಖಗಳಾಗುತ್ತವೆ. ನಾವು ಸುಖದಿಂದ ಉಬ್ಬುತ್ತೇವೆ, ದುಃಖದಿಂದ ಕುಸಿಯುತ್ತೇವೆ. ನಮ್ಮ ಜೀವನವೆಲ್ಲ ಸುಖದುಃಖಗಳ ಸಾಲೇ ಆಗಿರುವದರಿಂದ ನಮಗೆ ಉಬ್ಬುವದು, ಕುಸಿಯುವದು- ಎಂಬ ಏರಿಳಿತಗಳು ಆಗುತಲೇ ಇರುತವೆ.

ದ್ವಂದ್ವಗಳ ಹಾವಳಿಯಿಂದ ಪಾರಾಗಿರುವವರೂ ಕೆಲವರು ಈ ಲೋಕದಲ್ಲಿರುತ್ತಾರೆ. ಅಂಥವರು ಭಗವದ್ಭಕ್ತರೆನಿಸುವರು. ಭಗವಂತನು ಏರಿಳಿತಗಳಿಲ್ಲದವನು ; ಅವನನ್ನು ನೆನೆಯುತ್ತಿರುವ ಭಕ್ತರೂ ಏರಿಳಿತವಿಲ್ಲದ ಅಂತಃಕರಣದವರು, ದ್ವಂದ್ವಾತೀತರು.



# ೨೦. ಕೊಂಬೆಗೊ, ಬೇರಿಗೊ

ಒಂದು ಮನೆಯ ಅಂಗಳದಲ್ಲಿ ಒಂದು ಮಾವಿನ ಗಿಡವಿತ್ತು. ಆ ಗಿಡವು ಎಲ್ಲಾ ದಿಕ್ಕುಗಳಿಗೂ ಕೊಂಬೆಗಳನ್ನು ಬಿಟ್ಟಿತ್ತು, ಎಲೆಗಳು ಎಲ್ಲಾ ಕಡೆಗೂ ಚಿಗುರಿದ್ದವು. ವಸಂತಋತುವಾದ್ದರಿಂದ ಎಲೆಗಳು ಕೋಮಲವಾಗಿ ಕಾಣಿಸುತ್ತಿದ್ದವು.

ಆ ಮನೆಯಲ್ಲಿ ಒಬ್ಬನೇ ಒಬ್ಬ ಯುವಕನು ವಾಸವಾಗಿದ್ದನು. ಅವನು ಆ ಮನೆಯನ್ನು ಕೊಂಡು ನಾಲ್ಕೈದು ತಿಂಗಳಾಗಿತ್ತು. ಅದೇಕೊ, ಆ ತರುಣನು ಮರದ ಕೊಂಬೆಗಳಿಗೆಲ್ಲ ಮನೆಯ ಅಂಗಳದ ಪೌಳಿಯಮೇಲೆ ನಿಂತುಕೊಂಡು ಮೇಲುಗಡೆ ನೀರೆರಚುತ್ತಿದ್ದನು. ಅವನು ದಿನದಿನವೂ ತಪ್ಪದೆ ಈ ಕೆಲಸವನ್ನು ಮಾಡುತ್ತಿರುವುದನ್ನು ಕಂಡು ಒಬ್ಬ ಮುದುಕನು 'ಇದೇಕಪ್ಪ, ಕೊಂಬೆಗೆ ನೀರು ಎರೆಯುತ್ತೀಯೆ? ಬುಡಕ್ಕೇಕೆ ನೀರು ಹಾಕುವದಿಲ್ಲ?' ಎಂದು ಕೇಳಿದ್ದಕ್ಕೆ ಅವನು 'ಹಣ್ಣು ಕೊಂಬೆಯಲ್ಲಲ್ಲವೆ ಬಿಡುವದು, ಬುಡಕ್ಕೆ ಏಕೆ ನೀರು?' ಎಂದನಂತೆ!

ನಮ್ಮಲ್ಲನೇಕರು ಈ ಅವಿವೇಕದ ಕೆಲಸವನ್ನು ಮಾಡುತ್ತಿದ್ದೇವೆ. ಬುಡಕ್ಕೆ ಪಾತಿಯನ್ನು ಮಾಡಿ ನೀರೆರೆದರೆ ಬೇರಿಗೆ ಸೇರಿ ಗಿಡವನ್ನೆಲ್ಲ ಬದುಕಿರುವಂತೆ ಮಾಡುತ್ತದೆ ಎಂಬ ತತ್ತ್ವದ ನಿಜವು ನಮಗೆ ಮನವರಿಕೆಯಾಗಿಲ್ಲ. ನಮ್ಮ ಜೀವವೃಕ್ಷವು ಚಿಗುರಿ, ಪಲ್ಲವಿಸಿ, ಹೂವಾಗಿ, ಹಣ್ಣುಬಿಡುವದು ಜೀವನದ ಮೇಲುಗಡೆಯೇ ಸರಿ, ಆದರೆ ಅದರ ಬೇರು ಕಾಣಿಸದಂತೆ ಒಳಗೆ ಹೂತುಕೊಂಡುಬಿಟ್ಟಿದೆ. ನಮ್ಮ ಮನಸ್ಸಿನಲ್ಲಿ ಶುಭಭಾವನೆಗಳೆಂಬ ಬೇರುಗಳಿದ್ದರೆ ಶುಭಫಲಗಳು ಜೀವನದಲ್ಲಿ ಕಾಣಿಸಿಕೊಳ್ಳುತ್ತವೆ; ಶುಭಭಾವನೆಗಳಿಗೆ ತಾಯಿಬೇರಾದ ಭಗವಂತನ ಚಿಂತನೆಯನ್ನು ನಾವು ಮಾಡಿಕೊಂಡರೆ ಬೇರಿಗೆ ನೀರೆರೆದಂತೆ. ಆಗಲೇ ಜೀವನವೃಕ್ಷದಲ್ಲಿ ಶುಭಫಲಗಳು ಕಾಣಿಸುವವು.

❀❀❀

# ೨೧. ನಮ್ಮ ಹತ್ತಿರದಲ್ಲಿಯೇ ಇರುವ ಪರಮಮಿತ್ರ

ಕಡುಬಡವನಾದ ಒಬ್ಬ ಬ್ರಾಹ್ಮಣನು ತನ್ನ ಪರಮಮಿತ್ರನೊಬ್ಬನನ್ನು ಒಂದು ದಿನ ಸ್ಮರಿಸಿಕೊಂಡನು. ಅವನು ಆ ಮಿತ್ರನನ್ನಗಲಿ ಬಹಳ ವರ್ಷಗಳಾಗಿದ್ದವು. ಈಗ ತನ್ನ ಸ್ಥಿತಿಯು ಅವನಿಗೆ ತಿಳಿದರೆ, ತನ್ನ ಬಡತನವು ಕೂಡಲೆ ಇಂಗಿಹೋಗಬಹುದು ಎಂದು ಅವನಿಗೆ ಅನ್ನಿಸಿತು. ಸರಿ, ಅವನು ಕೂಡಲೆ ಒಂದು ದೀರ್ಘವಾದ ಪತ್ರವನ್ನು ಬರಯುವದಕ್ಕೆ ಮೊದಲು ಮಾಡಿದನು. ಈಗಿರುವ ತನ್ನ ಕುಟುಂಬದ ಸ್ಥಿತಿ, ತನಗೆ ಬೇಕಾಗಿರುವ ಆರ್ಥಿಕಸಹಾಯ, ತನಗೆ ಮತ್ತೆ ಯಾರೊಬ್ಬರ ನೆರವೂ ಇಲ್ಲದೆ ಇರುವದು - ಮುಂತಾದ ವಿವರವನ್ನೆಲ್ಲ ಪತ್ರದಲ್ಲಿ ಬರೆದು ಒಂದುಸಲ ಓದಿ ಕಾಗದವನ್ನು ಮಡಿಸಿ ಮಿತ್ರನ ವಿಳಾಸವನ್ನು ಬರೆದು ಟಪಾಲಿಗೆ ಹಾಕುವದಕ್ಕೆಂದು ಮೇಲಕ್ಕೆದ್ದನು. ಅಷ್ಟರಲ್ಲಿ ಆ ಮಿತ್ರನೇ ತನ್ನೆದುರಿಗೆ ನಿಂತಿರುವದನ್ನು ಕಂಡು ಅವನಿಗೆ ಹಿಡಿಸಲಾರದಷ್ಟು ಆಶ್ಚರ್ಯವೂ ಸಂತೋಷವೂ ಆಯಿತು. 'ನೀನು ಯಾವಾಗ ಬಂದೆ?' ಎಂದು ಕೇಳಿದ್ದಕ್ಕೆ 'ನೀನು ಕಾಗದವನ್ನು ಬರೆಯುವದಕ್ಕಾರಂಭಿಸಿದಾಗಲೇ ಬಂದೆನು; ಬರೆದದ್ದಾಗಲಿ, ಎಂದು ಮಾತನಾಡಿಸಲಿಲ್ಲ' - ಎಂದು ಮಿತ್ರನು ನುಡಿದನಂತೆ!

ಪರಮೇಶ್ವರನು ಎಲ್ಲಿಯೋ ದೂರದಲ್ಲಿದ್ದಾನೆಂದು ನಾವು ಬಗೆಬಗೆಯ ಪ್ರಾರ್ಥನೆಗಳನ್ನು ಮಾಡುತ್ತಿದ್ದೇವೆ. ಆದರೆ ಆತನು ನಾವು ಪ್ರಾರ್ಥನೆ ಮಾಡುತ್ತಿರುವಾಗಲೇ, ನಮ್ಮ ಹತ್ತಿರದಲ್ಲಿಯೇ ಇರುತ್ತಾನೆ. ಭಗವಂತನಿಗೆ ಅದು ಬೇಕು, ಇದು ಬೇಕು - ಎಂಬ ಪ್ರಾರ್ಥನೆಗಿಂತಲೂ ಅವನು ಇಲ್ಲಿಯೇ ಇದಾನೆ ಎಂಬ ಸಾಂನಿಧ್ಯಭಾವನೆ ಹೆಚ್ಚು ಬೇಗನೆ ಮುಟ್ಟುವದು.



# ೨೨. ಸತ್ತವರೂ ಬದುಕಬಹುದೆ?

ಸ್ಪೇನ್‌ದೇಶದಲ್ಲಿ ಒಬ್ಬ ಡಾಕ್ಟರನು ಇದ್ದಾನಂತೆ. ಆತನು ಬಹು ಪುರಾತನ ಕಾಲದಲ್ಲಿ ಸತ್ತವರ ಸ್ನಾಯುವನ್ನು ಒಂದಾನೊಂದು ಕ್ರಮದಿಂದ ಪೋಷಿಸಿ ಬೆಳೆಸುವ ಪ್ರಕಾರವನ್ನು ಕಂಡುಹಿಡಿದಿರುವನಂತೆ. ಎಚ್ಚರಿಕೆಯಿಂದ ಕಾಪಾಡಿಕೊಂಡಿರುವ ಮಾನವದೇಹಗಳನ್ನು ಮತ್ತೆ ಸಜೀವಗೊಳಿಸುವದೂ ಆಗಬಹುದು ಎಂಬುದು ಆತನ ಕಲ್ಪನೆಯಂತೆ! ಆದರೆ ಆ ಶರೀರಗಳು ಮತ್ತೂ ಸಾಯುವದಿಲ್ಲವೆ? ಆ ಶರೀರಗಳು ಸಜೀವವಾದಾಗ ಹಿಂದಿನ ಜೀವರೇ ಅವುಗಳಲ್ಲಿ ಬಂದು ನಿಲ್ಲುವರೊ, ಅಥವಾ ಮತ್ತೆ ಯಾವದಾದರೂ ಭೂತಪ್ರೇತಾದಿಗಳು ಅವುಗಳೊಳಕ್ಕೆ ಪ್ರವೇಶಿಸುವವೊ? ಇದು ನಿಶ್ಚಿತವಾಗುವದಕ್ಕೆ ವಿಜ್ಞಾನಶಾಸ್ತ್ರವು ಇನ್ನೂ ಬಹುಕಾಲ ಶೋಧನೆ ಮಾಡಬೇಕಾದೀತು.

ಇದು ಹೇಗೇ ಇರಲಿ, ಸತ್ತಜೀವರನ್ನು ನಿಜವಾಗಿ ಜೀವಂತರಾಗಿ ಮಾಡುವ ಸಂಜೀವಿನಿಯೊಂದಿದೆ. ಈಗ ಬದುಕಿರುವ ಅನೇಕ ಜೀವರುಗಳು ಅಜ್ಞಾನದಿಂದ ಸತ್ತಿರುತ್ತಾರೆ ; **ಅಧ್ಯಾತ್ಮವಿದ್ಯೆ** ಎಂಬ ಸಂಜೀವಿನಿಯನ್ನು ಕುಡಿಸಿದರೆ ಅವರು ಮತ್ತೆ ಬದುಕಿಕೊಳ್ಳುವರು ಎಂದು ಬಲ್ಲವರು ಹೇಳುತ್ತಾರೆ. ಜೀವರುಗಳೆಲ್ಲರೂ ಭಗವಂತನ ಅಂಶರೇ ಆಗಿ, ಭಗವಂತನಲ್ಲಿಯೇ ಸಚ್ಚಿದಾನಂದಸ್ವರೂಪರಾಗಿರುತ್ತಾರಾದರೂ ಹಲವರು ಅವಿದ್ಯೆಯಿಂದ ಆತ್ಮಹತ್ಯವನ್ನು ಮಾಡಿಕೊಂಡಿರುತ್ತಾರೆ. ಅಸತ್ಪುರುಷರೂ ಅಜ್ಞರೂ ದುಃಖಿಗಳೂ ಆಗಿರುವಂತೆ ತೋರುವವರೂ ಅಧ್ಯಾತ್ಮವಿದ್ಯಾಪಾನದಿಂದ ಮತ್ತೆ ಬದುಕಿ ಸಚ್ಚಿದಾನಂದಸ್ವರೂಪರಾಗುವದಕ್ಕೆ ಅವಕಾಶವಿದೆ.



## ೨೩. ವಿಶ್ವಾಮಿತ್ರ

ವಿಶ್ವಾಮಿತ್ರನೆಂಬ ಋಷಿಯ ಹೆಸರನ್ನು ನೀವು ಕೇಳಿಯೇ ಇರುತ್ತೀರಿ. ಅವನು ನಾಲ್ಕುದಿಕ್ಕುಗಳಲ್ಲಿಯೂ ತಪಸ್ಸನ್ನು ಮಾಡಿ ಕೊನೆಗೆ ವಸಿಷ್ಠರೇ ಮೊದಲಾದ ಋಷಿಗಳಿಂದಲೂ ಬ್ರಹ್ಮಾದಿದೇವತೆಗಳಿಂದಲೂ ಬ್ರಾಹ್ಮಣನು, ಬ್ರಹ್ಮರ್ಷಿಯು - ಎಂದರೆ ಎಲ್ಲಕ್ಕೂ ಹೆಚ್ಚಿನ ಪರಮಾರ್ಥ ತತ್ತ್ವವನ್ನು ಕಂಡುಕೊಂಡ ಮಹಾಜ್ಞಾನಿಯು - ಎಂಬ ಗೌರವವನ್ನು ಪಡೆದುಕೊಂಡನು - ಎಂದು ರಾಮಾಯಣಾದಿಗಳಲ್ಲಿ ವರ್ಣಿತವಾಗಿರುತ್ತದೆ.

ಆದರೆ ವಿಶ್ವಾಮಿತ್ರನೆಂಬ ಹೆಸರು ಪುರಾಣೇತಿಹಾಸಗಳಿಗಿಂತಲೂ ಪುರಾತನವಾದದ್ದು. ವೇದಗಳಲ್ಲೆಲ್ಲ ಅತ್ಯಂತಪುರಾತನವೆಂದು ಐತಿಹಾಸಿಕರು - ಕೂಡ ಒಪ್ಪಿರುವ, ಸನಾತನವಾದದ್ದೆಂದು ವೈದಿಕರು ಹೇಳುತ್ತಿರುವ, ಋಗ್ವೇದದಲ್ಲಿಯೇ ಆತನ ಹೆಸರು ಕಾಣಿಸುತ್ತದೆ. ಆರ್ಯರೆಲ್ಲರೂ ಪರಮಪವಿತ್ರವೆಂದು ಭಾವಿಸುವ ಗಾಯತ್ರೀಮಂತ್ರವು ಆತನಿಗೆ ಮೊಟ್ಟಮೊದಲು ಸ್ಫುರಿಸಿತು. ಆ ಮಂತ್ರದ ಸಂಕ್ಷೇಪಾರ್ಥವಿದು : **ಇಡಿಯ ಜಗತ್ತನ್ನೇ ಹಡೆದಿರುವ, ಜಗತ್ತಿಗೆಲ್ಲ ಕಲ್ಯಾಣವನ್ನುಂಟುಮಾಡುವ, ದೇವನ ಆ ವರಣೀಯವಾದ ತೇಜಸ್ಸನ್ನು ಧ್ಯಾನಿಸುವೆವು. ಆತನು ನಮ್ಮ ಬುದ್ಧಿವೃತ್ತಿಗಳನ್ನು ಪ್ರೇರಿಸಲಿ!''**

ವಿಶ್ವಾಮಿತ್ರ ಎಂಬ ಶಬ್ದಕ್ಕೆ ಜಗತ್ತಿಗೆಲ್ಲ ಮಿತ್ರನು ಎಂದರ್ಥ. ಸರ್ವಲೋಕಕಲ್ಯಾಣಕರವಾದ ವ್ಯವಹಾರವು ಅತ್ಯಂತವಾದ ಕಲ್ಯಾಣವೃತ್ತಿಗಳಿಂದಲೇ ಪ್ರೇರಿತವಾಗಿರುವದು. ಅತ್ಯಂತಕಲ್ಯಾಣವಾದ ವೃತ್ತಿಗಳು ಸಕಲ ಕಲ್ಯಾಣ-ಗುಣಾಕರನಾದ ಭಗವಂತನಿಂದಲೇ ಬರುವವು. ಕಲ್ಯಾಣಕರವಾದ ವ್ಯವಹಾರಕ್ಕೆ ಕಲ್ಯಾಣರೂಪನಾದ ಭಗವಂತನ ಧ್ಯಾನವಲ್ಲದೆ ಮತ್ತೆ ಯಾವದು ಕಾರಣವಾದೀತು?



# ೨೪. ನರ, ನಾರಾಯಣ

ಭಗವದ್ಗೀತೆಯನ್ನು ನೀವು ಓದಿದ್ದೀರಲ್ಲವೆ? ಅಲ್ಲಿ ನರನಿಗೆ ನಾರಾಯಣನು ಮಾಡಿದ ಬೋಧೆಯಿದೆ, 'ನಾರಾಯಣನಿಗೆ ನಮಸ್ಕಾರವನ್ನು ಮಾಡಿ ನರೋತ್ತಮನಾದ ನರನಿಗೂ ನಮಸ್ಕಾರವನ್ನು ಮಾಡಿ, ಸರಸ್ವತೀದೇವಿಯನ್ನೂ ನಮಸ್ಕರಿಸಿ, ಜಯವೆಂಬ ಭಾರತವನ್ನು ಹೇಳಬೇಕು ಅಥವಾ ಕೇಳಬೇಕು' ಎಂದು ಬಲ್ಲವರ ನುಡಿಯಿದೆ.

ಭಾರತವಲ್ಲಿ ನರನೆಂದರೆ ಅರ್ಜುನನು, ನಾರಾಯಣನು ಶ್ರೀಕೃಷ್ಣನು; ಅವರಿಬ್ಬರನ್ನೂ ಸ್ಮರಿಸಿದರೆ, ಅವರಿಬ್ಬರ ಸಂವಾದವನ್ನು ಮನದಂದುಕೊಂಡರೆ ನಮಗೆ ಜೀವನಸಂಗ್ರಾಮದಲ್ಲಿ ಜಯವು ದೊರಕುವದು ಖಂಡಿತ. ಭಾರತಯುದ್ಧಕಾಲದಲ್ಲಿ ಮಾತ್ರವೇ ಅಲ್ಲ, ಈಗಲೂ ನರನಿಗೆ ನಾರಾಯಣನ ಉಪದೇಶವಾಗುತ್ತಲೇ ಇದೆ.

ನರನು 'ನಾನು ಯುದ್ಧಮಾಡಲೊಲ್ಲೆನು, ಕರ್ತವ್ಯಕರ್ಮವು ನನಗೆ ಬೇಡ, ನಾನು ಸುಮ್ಮನೆ ಕುಳಿತಿರುವೆನು.' ಎನ್ನುತ್ತಿದಾನೆ. 'ಕರ್ತವ್ಯಕರ್ಮವನ್ನು ಮಾಡಿದರೆ ಅನೇಕರಿಗೆ ಹಿಂಸೆಯಾಗಬಹುದು, ನನಗೆ ದುಃಖವೊದಗಬಹುದು'- ಎಂದು ಅಂಜುತ್ತಿದಾನೆ. 'ಏಳು, ಕರ್ಮವನ್ನು ಮಾಡು, ಅದರಿಂದ ನಿನಗೆ ಯಾವ ಕಷ್ಟವೂ ಬಾರದಂತೆ, ಮಾಡಿದರೂ ಮಾಡದಂತೆ ಮಾಡಿಕೊಳ್ಳಬಹುದು. ನಿನ್ನ ಹೃದಯದಲ್ಲಿ ನಾನೇ ಇದ್ದುಕೊಂಡಿದೇನೆ, ನನ್ನ ಪ್ರೇರಣೆಯಾದಂತೆ ಕರ್ತವ್ಯವನ್ನು ಮಾಡು. ಕರ್ಮವು ನನ್ನದೆಂಬ ಹೆಮ್ಮೆ ಬೇಡ, ಈ ಕರ್ಮಕ್ಕೆ ಈ ಫಲವೇ ಆಗಬೇಕೆಂಬ ಪಟ್ಟು ಬೇಡ. ಇದು ಈಶ್ವರನಿಗೆ ಮೆಚ್ಚಾಗಲಿ , -ಎಂದು ಮಾಡು. ನಿನಗೆ ಎಲ್ಲಾ ಬಗೆಯಿಂದಲೂ ಕಲ್ಯಾಣವಾಗುವದು' ಎಂದು ನಾರಾಯಣನು ಉಪದೇಶಿಸುತ್ತಿದಾನೆ.

ನೀವು ಈ ನಾರಾಯಣನ ಉಪದೇಶಕ್ಕೆ ಕಿವಿಗೊಡುತ್ತಿರುವಿರೊ?



# ೨೫. ರಾಮರಾಜ್ಯ

ಉತ್ತಮವಾದ ಆನಂದದಾಯಕವಾದ ರಾಜ್ಯವನು ರಾಮರಾಜ್ಯವೆಂದು ಕರೆಯುವ ಪದ್ಧತಿಯಿದೆ. ರಾಜಕೀಯರಂಗದಲ್ಲಿ ರಾಮರಾಜ್ಯ ಸ್ಥಾಪನೆಗೆ ಪ್ರಯತ್ನಮಾಡಿದವರು ಹಲವರುಂಟು. ಈಗಲೂ ರಾಮರಾಜ್ಯಕ್ಕೆಂದು ಹೊಡೆದಾಡುವ ರಾಜಕಾರಣಿಗಳ ಗುಂಪು ಇದ್ದೇ ಇದೆ.

ಆದರೆ ಯಾವ ರಾಜ್ಯವು ತಾನೆ ಸರ್ವಸಮ್ಮತವಾದೀತು? ಪ್ರತಿಪಕ್ಷವಿಲ್ಲದ, ಶತ್ರುಗಳಿಲ್ಲದ, ರಾಷ್ಟ್ರವು ಯಾವದುತಾನೆ ಇದೆ? **ರಾಜ್ಯವು ಅಥವಾ ರಾಷ್ಟ್ರವು ಕೆಲವು ಧ್ಯೇಯಗಳನ್ನು ಪಡೆದುಕೊಳ್ಳುವದಕ್ಕಾಗಿಯೇ ಬೇಕಾಗಿದೆ.** ಆ ಧ್ಯೇಯಗಳು ಸರ್ವಸಮ್ಮತವಾಗಿ ದೊರಕುವ ಸಂಭವವಿದೆಯೆ? ದಶರಥನ ಮಗನಾದ ಶ್ರೀರಾಮನ ರಾಜ್ಯವು ಬರಬೇಕು - ಎಂದು ಬಯಸುವದು ಭೂತಕಾಲವನ್ನು ವರ್ತಮಾನಕಾಲವಾಗಿ ಮಾಡಿಕೊಳ್ಳುವ ಪ್ರಯತ್ನವಲ್ಲವೆ? ಇದಲ್ಲದೆ ವರ್ತಮಾನಕಾಲದಲ್ಲಿ ಎಲ್ಲರೂ ಶ್ರೀರಾಮನ ಹೆಸರನ್ನು ಮೆಚ್ಚುವ ಸನಾತನಿಗಳಲ್ಲವಲ್ಲ!

ನಿಜವಾದ ರಾಮರಾಜ್ಯವೊಂದಿದೆ. ರಾಮನೆಂದರೆ ಆನಂದ ರೂಪನಾದ ಭಗವಂತನು. ಅವನು ನಮ್ಮೆಲ್ಲರ ಹೃದಯದಲ್ಲಿಯೇ ಇರುತ್ತಾನೆಂದು ಅನುಭವಿಗಳಾದ ಭಕ್ತರು ಹೇಳುತ್ತಾರೆ. ಅವನು ನಿತ್ಯನು ; ಅವನ ರಾಜ್ಯವೂ ನಿತ್ಯವು. ಈ ರಾಮರಾಜ್ಯದ ಪ್ರಜೆಗಳಾಗುವದಕ್ಕೆ ನಮಗೆಲ್ಲರಿಗೂ ಹಕ್ಕಿದೆ; ಆ ರಾಜ್ಯದ ಪ್ರಜೆಗಳಾಗುವದೇ ಪುರುಷಾರ್ಥವೆಂದು ನಾವೆಲ್ಲರೂ ಒಪ್ಪಿರುತ್ತೇವೆ.

ಆದರೆ ರಾಮರಾಜ್ಯದ ಪ್ರಜಾತ್ವಕ್ಕೆ ಒಂದು ಷರತ್ತು ಇದೆ. ಕಾಮರಾಜ್ಯದವರು ಆ ರಾಜ್ಯಕ್ಕೆ ಪ್ರಜೆಗಳಾಗಲಾರರು. ರಾಮನು ನಮ್ಮೆಲ್ಲರ ಆತ್ಮನು. ಎಲ್ಲೆಲ್ಲಿಯೂ ರಾಮರಾಜ್ಯವೇ ಇದೆ ಎಂಬುದು ಈ ಭಜನೆಯಿಂದ ನಮಗೆ ದಕ್ಕುವದು.



# ೨೬. ಒಳನೋಟ

ಕೆಲವು ಕಿಟಕಿಗಳೂ ಬಾಗಿಲುಗಳೂ ಹೊರಕ್ಕೆ ತೆಗೆದುಕೊಳ್ಳುವಂತಿರುತ್ತವೆ; ಮತ್ತೆ ಕೆಲವು ಒಳಕ್ಕೆ ತೆಗೆದುಕೊಳ್ಳುತ್ತಿರುತ್ತವೆ. ನಮ್ಮ ಇಂದ್ರಿಯಗಳೆಲ್ಲ ಹೊರಕ್ಕೆ ಮಾತ್ರ ತೆರೆದುಕೊಳ್ಳುವ ಕಿಟಕಿಗಳು. ಅವುಗಳ ಮೂಲಕ ನಾವು ಹೊರಗಿನ ವಸ್ತುಗಳನ್ನು ಮಾತ್ರ ಕಾಣಬಹುದಾಗಿರುತ್ತದೆ.

ಇಂದ್ರಿಯಗಳ ಶಕ್ತಿಯನ್ನು ನಾವು ಬೆಳೆಯಿಸಿಕೊಳ್ಳಬಹುದು. ಆದರೆ ಅದರಿಂದ ಅವಕ್ಕೆ ಹೊರಕ್ಕೆ ನೋಡುವ ಶಕ್ತಿಯು ಬೆಳೆದೀತೇ ಹೊರತು ಅವುಗಳಿಂದ ಒಳಕ್ಕೆ ನೋಡುವದು ಆಗಲಾರದು. ನಮ್ಮ ಅಂತಃಕರಣವು ಇಂದ್ರಿಯಗಳ ಮೂಲಕವೇ ನೋಡುತ್ತಿದ್ದರೆ ಅದಕ್ಕೆ ಹೊರನೋಟವು ಮಾತ್ರ ಇರುತ್ತದೆ.

ಆದರೆ ಅಂತಃಕರಣದಿಂದ ಒಳಗೆ ನೋಡುವದಕ್ಕೂ ಬರುತ್ತದೆ. ಅಂತಃಕರಣವು ತನ್ನಲ್ಲಿಯೇ ಏಳುವ ವೃತ್ತಿಗಳನ್ನೂ ನೋಡಿಕೊಳ್ಳಬಲ್ಲದು. ನೀವು ನಿಮ್ಮ ಅಂತಃಕರಣದೊಳಗೆ ಉಂಟಾಗುತ್ತಿರುವ ಭಾವಗಳನ್ನು ಕುರಿತು ವಿಚಾರಿಸಿರಿ. ಆಗ ಆತ್ಮಪರೀಕ್ಷೆಯು ಮೊದಲಾಯಿತು. ಒಳನೋಟವು ಪ್ರಾರಂಭವಾಯಿತು. ಆದರೆ ಈ ಭಾವಗಳು ಎಲ್ಲಿಂದ ಬರುತ್ತವೆ? ಅವಕ್ಕೆಲ್ಲ ಮೂಲವು ಯಾವದು? - ಎಂಬುದನ್ನು ವಿಚಾರಿಸಿದರೆ ಒಳನೋಟವು ಬಲಿತುಕೊಂಡಂತೆ ಆಯಿತು. ನಿಮ್ಮ ಭಾವನೆಗಳಿಗೆಲ್ಲ ಮೂಲವೊಂದಿದೆ. ಅದಕ್ಕೆ ಭಗವಂತನೆಂದು ಹೆಸರು. ಒಳನೋಟದಿಂದ ಭಗವಂತನನ್ನು ಕಂಡುಕೊಳ್ಳಿರಿ.



# ೨೭. ವಾಸನಾಪ್ರಪಂಚ

ಯಾವುದಾದರೊಂದು ವಸ್ತುವನ್ನು ನೋಡಿದ್ದರೆ, ಯಾವದಾದರೊಂದು ಮಾತನ್ನು ಕೇಳಿದ್ದರೆ, ಯಾವದಾದರೊಂದು ವಸ್ತುವನ್ನು ಮುಟ್ಟಿದ್ದರೆ, ಯಾವದಾದರೊಂದು ಊಟವನ್ನು ಸವಿನೋಡಿದ್ದರೆ, ಯಾವದಾದ ರೊಂದು ಹೂವಿನ ಗಂಧವನ್ನು ಮೂಸಿದ್ದರೆ, ಆ ಅನುಭವವು ಆದಬಳಿಕ ಮರೆಯಾಗುವದು ; ಮತ್ತೆ ಬೇರೆಬೇರೆಯ ಅನುಭವಗಳಾಗುತ್ತಿರುವವು. ಈ ಅನುಭವಗಳು ಪ್ರಿಯವಾಗಿದ್ದರೆ ನಮಗೆ ಸುಖವೂ ಅಪ್ರಿಯವಾಗಿದ್ದರೆ ದುಃಖವೂ ಆಗುವದು. ಹೀಗೆ ಅನುಭವಗಳಿಂದ ಸುಖದುಃಖಗಳೂ ಆಗುತ್ತಿರುವದೂ, ಅವುಗಳಿಂದ ಹರ್ಷವಿಷಾದಗಳುಂಟಾಗುತ್ತಿರುವದೂ 'ಜೀವನ' ಎನಿಸುವದು.

ಹಿಂದೆ ಒಂದುಸಲ ಆಗಿದ್ದ ಅನುಭವವು ಮತ್ತೆ ಆದರೆ ಅದನ್ನು ಕೂಡಲೆ ನಮ್ಮ ಮನಸ್ಸು ಗುರುತಿಸಿಬಿಡುತ್ತದೆ. ಅಲ್ಲವೆ? ಮನಸ್ಸಿಗೆ ಈ ಶಕ್ತಿ ಎಲ್ಲಿಂದ ಬರುತ್ತದೆ? ಒಂದೊಂದು ಅನುಭವದಿಂದಲೂ ಮನಸ್ಸಿನಲ್ಲಿ ಒಂದೊಂದು ಸಂಸ್ಕಾರವು ಆಗಿಬಿಡುತ್ತದೆ; ಆ ಸಂಸ್ಕಾರವು ಮನಸ್ಸಿನೊಳಗೇ ಅಡಗಿಕೊಂಡಿರುತ್ತದೆ. ಆದರೆ ಅದಕ್ಕೆ ಅನುಗುಣವಾದ ಮತ್ತೊಂದು ಅನುಭವವು ಬಂದರೆ ಅದು ಕೂಡಲೆ ಎದ್ದುಕೊಳ್ಳುತ್ತದೆ . 'ಹಾ! ಇದೇ ಅನುಭವವು ನನಗೆ ಮೊದಲಾಗಿತ್ತು' ಎನಿಸುತ್ತದೆ.

ಅಂತಃಕರಣದಲ್ಲಿ ಇಂಥ ಸಂಸ್ಕಾರಗಳು ನೂರಾರು ಒಳಗೆ ಸೇರಿಕೊಂಡಿರುತ್ತವೆ. ಆ ಭಾಗಕ್ಕೆ 'ವಾಸನಾಪ್ರಪಂಚ'ವೆಂದು ಹೆಸರು. ನಮ್ಮ ವಾಸನಾಪ್ರಪಂಚಕ್ಕೆ ಹಳೆಯ ವಾಸನೆಗಳಿಗೆ ತಕ್ಕ ಹೊಸ ಸಂಸ್ಕಾರಗಳು ಬಂದರೆ ಮಾತ್ರ ಅವು ಅಲ್ಲಿ ನಿಲ್ಲುತ್ತವೆ; ಇಲ್ಲದಿದ್ದರೆ ಅವಕ್ಕೆ ಅಲ್ಲಿ ಸ್ಥಳವಿರುವದಿಲ್ಲ. ನಿಮ್ಮ ವಾಸನಾಪ್ರಪಂಚದಲ್ಲಿ ಅಧ್ಯಾತ್ಮಸಂಸ್ಕಾರಗಳಿವೆಯೆ, ಭಗವದ್ವಿಚಾರಕ್ಕೆ ಎಡೆಯಿದೆಯೆ? ನೋಡಿಕೊಳ್ಳಿ.

ಯೊಂಯೊಂ

## ೨೮. ಭಾವದಂತೆ ಫಲ

ಹೊರಗಿನ ಜನರಲ್ಲಿಯೂ ಪ್ರಾಣಿಗಳಲ್ಲಿಯೂ ವಸ್ತುಗಳಲ್ಲಿಯೂ ನಮ್ಮ ದೃಷ್ಟಿಯು ಹೇಗಿರುವದೋ ಅದಕ್ಕನುಗುಣವಾಗಿಯೇ ಆ ಜನರು, ಆ ಪ್ರಾಣಿಗಳು, ಆ ವಸ್ತುಗಳು ನಮ್ಮಮೇಲೆ ಪ್ರಭಾವಕಾರಿಗಳಾಗುವವು. ಇದೊಂದು ಹೆಚ್ಚಿನ ತತ್ತ್ವವು.

ಅದೇನು ಮಾಯೆಯೋ, ಈಗೀಗ ಜನರು ಎಲ್ಲವನ್ನೂ ಸಂಶಯ ದೃಷ್ಟಿಯಿಂದಲೇ ನೋಡುತ್ತಿರುವರು. ಇವರು ನನಗೇನು ಮಾಡುವರೊ, ಈ ಪ್ರಾಣಿಗಳು ಎಲ್ಲಿ ನನ್ನಮೇಲೆ ಜೀಳುವವೊ, ಈ ವಸ್ತುಗಳಿಂದ ನನಗೆ ಯಾವ ಕೆಡಕು ಆಗುವದೊ! - ಎಂಬ ಅಂಜಿಕೆಯಿಂದಲೇ ಎಲ್ಲವನ್ನೂ ಕಾಣುತ್ತಿರುವದು ನಮ್ಮಗಳಲ್ಲಿ ಅನೇಕರ ಸ್ವಭಾವವಾಗಿಬಿಟ್ಟಿದೆ. ವ್ಯಕ್ತಿಗಳಂತೆ ರಾಷ್ಟ್ರಗಳೂ ಭಾವಿಸುತ್ತಿವೆ. ಮತ್ತೊಂದು ರಾಷ್ಟ್ರದಿಂದ ನಮಗೆ ಯಾವಾಗ ಯಾವ ತೊಂದರೆಯಾದೀತೊ - ಎಂಬ ಚಿಂತೆಯು ಅನೇಕ ರಾಷ್ಟ್ರಗಳನ್ನು ಹಿಡಿದುಕೊಂಡುಬಿಟ್ಟಿದೆ. ಇದರಿಂದ ಎಲ್ಲರಿಗೂ ಎಲ್ಲರಲ್ಲಿಯೂ ಸಂಶಯವೇ ಉಂಟಾಗಿ, ಎಲ್ಲರೂ ರಕ್ಷಣೋಪಾಯಗಳನ್ನು ಕೈಗೊಳ್ಳುತ್ತಿದ್ದಾರೆ. ಆದರೆ ತಮ್ಮ ಹೊರತು ಮಿಕ್ಕವರೆಲ್ಲರಿಗೂ ಅವು ಭಕ್ಷಣೋಪಾಯ ಗಳಂತೆಯೇ ಕಾಣಿಸುತ್ತವೆ - ಎಂಬುದನು ಅವರು ಅರಿಯರು.

ಸದ್ಭಾವನೆಯಿಂದ ನಿಮ್ಮ ಸುತ್ತಿನವರನ್ನು ಕಂಡು ಅದರ ಫಲವೇನಾದೀತೆಂಬುದನ್ನು ಪರೀಕ್ಷಿಸಿದ್ದೀರ? ನಾನು ಯಾರಿಗೂ ಮೋಸಮಾಡುವಂತಿಲ್ಲ, ನನಗೆ ಯಾರು ಮೋಸಮಾಡಿಯಾರು? - ಎಂದು ಮಾತ್ರವಲ್ಲ ; ಎಲ್ಲರೂ ಭಗವಂತನ ಮಕ್ಕಳೇ, ಎಲ್ಲವೂ ಭಗವಂತನ ಸೃಷ್ಟಿಯೇ - ಎಂಬ ಸದ್ಭಾವನೆಯನ್ನು ಅಭ್ಯಾಸಮಾಡಿ ನೋಡಿರಿ. ನಿಮ್ಮ ಸುತ್ತಮುತ್ತಲಿನ ಜನರೂ ಪ್ರಾಣಿಗಳೂ ವಸ್ತುಗಳೂ - ನೀವು ದುಷ್ಟವೆಂದು ಎಣಿಸಿರುವವು ಕೂಡ - ನಿಮಗೆ ಮಿತ್ರರಾಗಿ ಪರಿಣಮಿಸುವರು.

# ೨೯. ಅಂತಃಕರಣಕ್ಕೆ ಆಹಾರ

ಆಹಾರವಿಲ್ಲದೆ ಯಾರೂ ಬದುಕಿರಲಾರರು, ಅನ್ನ-ನೀರು ಜೀವನಕ್ಕೆ ಬಹಳ ಮುಖ್ಯ. ಈ ಮಾತು ಎಲ್ಲರ ಬಾಯಿಯಲ್ಲೂ ಇರುತ್ತದೆ; ಇದರಲ್ಲಿ ನಿಜದ ಅಂಶವೂ ಇದೆ. ಆದರೆ ಒಂದು ಚಂದನದ ಬೊಂಬೆಗೆ ಅನ್ನವನ್ನು ಬಳಿದು ನೀರುಹಾಕಿದರೆ ಅದು ಜೀವಿಸುವದೇನು ? ಇಲ್ಲ. ಏಕೆ? ಅದಕ್ಕೆ ಜೀವನದ ಮೂಲಾಧಾರವಿಲ್ಲ. ಅದರ ಮೈಯಲ್ಲಿ ಬಿಸಿಯಿಲ್ಲ, ಮಾಂಸಖಂಡಗಳಿಲ್ಲ , ರಕ್ತವಿಲ್ಲ , ಎಲುಬಿಲ್ಲ , ಮಜ್ಜೆಯಿಲ್ಲ ; ಎಲ್ಲಕ್ಕೂ ಮುಖ್ಯವಾಗಿರುವ ಅಂತಃಕರಣವು ಇಲ್ಲವೇ ಇಲ್ಲ .

ನಿಮ್ಮ ಶರೀರದಲ್ಲಿ ಮಾಂಸ, ರಕ್ತ - ಮುಂತಾದವುಗಳು ಬೆಳೆಯುವ - ದಕ್ಕೆ ನಿಮಗೆ ಆಹಾರವು ಬೇಕಲ್ಲವೆ? ಹಾಗೆಯೇ ನಿಮ್ಮ ಅಂತಃಕರಣವು ಬೆಳೆಯುವದಕ್ಕೆ ಅದಕ್ಕೆ ವಿಚಾರಶಕ್ತಿ ಬೇಕು, ನೀತಿಮತಗಳ ತಿಳಿವಳಿಕೆ ಬೇಕು, ಭಕ್ತಿ, ಜ್ಞಾನ, ವೈರಾಗ್ಯಗಳು ಬೇಕು. ಶರೀರದ ಹಸಿವು ಬಾಯಾರಿಕೆಗಳನ್ನು ಅಡಗಿಸಿ ಅದಕ್ಕೆ ಪುಷ್ಟಿತುಷ್ಟಿಗಳನ್ನು ಕೊಡುವದಕ್ಕೆ ಹೇಗೆ ಹೊರಗಿನ ಆಹಾರವು ಬೇಕೋ, ಹಾಗೆಯೇ ಅಂತಃಕರಣದ ಹಸಿವುಬಾಯಾರಿಕೆಗಳನ್ನು ಅಡಗಿಸಿ ಪುಷ್ಟಿತುಷ್ಟಿಗಳನ್ನು ಕೊಡುವದಕ್ಕೆ ಅದಕ್ಕೂ ಆಧ್ಯಾತ್ಮಿಕವಾದ ಆಹಾರವು ಬೇಕು. ಭಗವದ್ಭಕ್ತಿ - ಎಂಬುದು ಸುಲಭವಾಗಿ ದೊರೆಯುವ, ಸುಲಭವಾಗಿ ಜೀರ್ಣಿಸುವ, ಬೇಗನೆ ತುಷ್ಟಿಪುಷ್ಟಿಗಳನ್ನು ಕೊಡುವ ಆಧ್ಯಾತ್ಮಿಕಾಹಾರವು.



# ೩೦. ಪ್ರಾರ್ಥನೆ, ಸ್ತೋತ್ರ, ಧ್ಯಾನ

ನಾವು ನಮಗೆ ಪರಿಚಿತರಾದ ದೊಡ್ಡಮನುಷ್ಯರನ್ನು ನಮಗೆ ಬೇಕಾದದ್ದನ್ನು ದಯಮಾಡಿಕೊಡಿರೆಂದು ಬೇಡುತ್ತಿರುವೆವು ; ಇದು **ಪ್ರಾರ್ಥನೆ**ಯೆನಿಸುವದು. ಅವರನ್ನು ಆಗಾಗ್ಗೆ ಗುಣಗಾನವನ್ನು ಮಾಡಿ ಹೊಗಳುವೆವು; ಅದರಿಂದ ಅವರಿಗೆ ಸಂತೋಷವಾಗಲಿ, ನಮ್ಮಲ್ಲಿ ಅವರು ಪ್ರಸನ್ನರಾಗಲಿ - ಎಂಬುದು ನಮ್ಮ ಉದ್ದೇಶ. ಈ ಕ್ರಿಯೆಯು **ಸ್ತೋತ್ರ**ವೆನಿಸುವದು. ನಮಗೆ ಅವರು ಮಾಡಿದ ಉಪಕಾರವನ್ನು ಆಗಾಗ್ಗೆ ಸ್ಮರಿಸಿಕೊಳ್ಳುತ್ತಿರುವೆವು; ಅವರಹೆಚ್ಚುಗೆಯನ್ನೂ ಉಪಕಾರಬುದ್ಧಿಯನ್ನೂ ಮನಸ್ಸಿನಲ್ಲಿ ಹೊರಳಾಡಿಸುತ್ತಿರುವೆವು . ಇದು **ಧ್ಯಾನ**ವೆನಿಸುವದು.

ಭಗವಂತನು ನಮ್ಮೆಲ್ಲರಿಗಿಂತಲೂ ದೊಡ್ಡವನು, ಮಹಾಮಹಿಮನು. ಅವನನ್ನು ನಾವು ನಮ್ಮ ಇಷ್ಟಾರ್ಥವನ್ನು ನೀಡೆಂದು ಬೇಡಿಕೊಳ್ಳುವದು ಸ್ವಾಭಾವಿಕವಾಗಿದೆ ; ಇದು **ದೇವತಾಪ್ರಾರ್ಥನೆ**ಯಾಯಿತು. ಭಗವಂತನಲ್ಲಿ ಅನಂತಗುಣಗಳು ಇರುತ್ತವೆ ; ಅವುಗಳನ್ನು ಕೊಂಡಾಡಿದರೆ ಆತನು ನಮ್ಮಲ್ಲಿ ಪ್ರಸನ್ನನಾಗುವನೆಂದೂ ನಾವು ನಿರೀಕ್ಷಿಸಬಹುದು ; ಇದು ಭಗವಂತನ **ಸ್ತೋತ್ರವು.** ಭಗವಂತನು ನಮಗೆ ಮಾಡಿರುವ ಉಪಕಾರವನ್ನೂ ಆತನ ದಯಾಲುತ್ವವನ್ನೂ ಮನಸ್ಸಿನಲ್ಲಿ ಹೊರಳಾಡಿಸುವದೂ ನಮಗೆ ಇಷ್ಟವಾಗ ಬಹುದು; ಅದು ಭಗವಂತನ **ಧ್ಯಾನವು.** ಭಗವಂತನ ಪ್ರಾರ್ಥನೆ, ಸ್ತೋತ್ರ, ಧ್ಯಾನ - ಇವುಗಳು ನಮ್ಮ ಅಂತಃಕರಣಶುದ್ಧಿಗೂ ಅಂತಃಕರಣದ ಭಾವಗಳ ಪುಷ್ಟಿಗೂ ಕಾರಣವಾಗುವದು. ಅದರಿಂದ ನಮ್ಮ **ಸಂನಿವೇಶವೂ** ಉತ್ತಮವಾಗುವದು.



# ೩೧. ಸಾರ್ವತ್ರಿಕಧರ್ಮಕ್ಕೆ ಮೂಲ

ಹಿಂದು, ಮುಸಲ್ಮಾನ, ಕ್ರಿಶ್ಚಿಯನ್, ಬೌದ್ಧ, ಜೈನ, ಸಿಖ್ಖ, ಪಾರಸಿ - ಮುಂತಾದ ಅನೇಕ ಮತಗಳು ಇವೆ. ಈ ಎಲ್ಲರೂ ತಮ್ಮ ತಮ್ಮ ಮತಗ್ರಂಥಗಳನ್ನು ನಮ್ಮ ಮುಂದಿಟ್ಟು ಧರ್ಮದಿಂದ ನಡೆದುಕೊಳ್ಳಿರಿ ಎಂದು ಬೋಧಿಸುತ್ತಿದ್ದಾರಷ್ಟೆ. ಆದರೆ ಎಲ್ಲರಿಗೂ ಸಾಧಾರಣವಾದ ಧರ್ಮಗಳು ಬೇರೆಯಿವೆ. ಆಚಾರರೂಪವಾದ ಧರ್ಮಗಳು ಕಾಲದೇಶಗಳಿಂದ ಬೇರ್ಪಡಬಹುದು ; ಈ ಸಾಧಾರಣಧರ್ಮಗಳು ಮಾತ್ರ ಎಂದೆಂದಿಗೂ ಎಲ್ಲೆಲ್ಲಿಯೂ ಧರ್ಮಗಳೇ ಆಗಿರುವವು.

**ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿನ್ದ್ರಿಯನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥**

ಶರೀರೇಂದ್ರಿಯಮನಸ್ಸುಗಳನ್ನು ಕುಸಿಯದಂತೆ ಇಟ್ಟುಕೊಳ್ಳುವದು, ಮತ್ತೊಬ್ಬರ ಅಪರಾಧವನ್ನು ಮನ್ನಿಸುವದು, ಮನಸ್ಸನ್ನು ಹರಿಯಬಿಡದಿರು-ವದು, ಮತ್ತೊಬ್ಬರ ಸ್ವತ್ತಿಗೆ ಆಶೆಮಾಡದಿರುವದು, ಶರೀರವನ್ನೂ ಮನಸ್ಸನ್ನೂ ಶುಚಿಯಾಗಿಟ್ಟುಕೊಳ್ಳುವದು, ಇಂದ್ರಿಯಗಳನ್ನು ವಶದಲ್ಲಿಟ್ಟು ಕೊಂಡಿರುವದು, ಸಾತ್ತ್ವಿಕಬುದ್ಧಿ, ಜ್ಞಾನಸಂಪಾದನೆ, ಸತ್ಯವನ್ನು ನುಡಿಯು-ವದು, ಸಿಟ್ಟು ಮಾಡದಿರುವದು - ಈ ಹತ್ತೂ ಸಾಧಾರಣಧರ್ಮಗಳು.

ಇವನ್ನೆಲ್ಲ ಸಂಪಾದಿಸಿಕೊಳ್ಳುವದು ಹೇಗೆ? - ಎಂದು ಕೆಲವರು ಕೇಳುತ್ತಾರೆ. **ಧರ್ಮಸ್ಯ ಪ್ರಭುರಚ್ಯುತಃ** ಧರ್ಮಕ್ಕೆ ಭಗವಂತನೇ ಪ್ರಭು, ಭಗವಂತನ ಸ್ಮರಣೆಯನ್ನು ಆದಷ್ಟು ಬಿಡದಿರಿ ; ಅಂದರೆ ನಿಮಗೆ ಧರ್ಮದ ದಾರಿಯಲ್ಲಿಯೇ ನಡೆಯುವದು ಶಕ್ಯವಾಗುತ್ತದೆ.

# ೩೨. ಭಗವಂತನಲ್ಲಿ ಬೇಡತಕ್ಕದ್ದು

'ಏನ ಬೇಡಲಿ ನಿನ್ನ ಬಳಿಗೆ ಬಂದು' ಎಂಬ ದಾಸರ ಪದವನ್ನು ನೀವು ಕೇಳಿದ್ದೀರೊ? ಯಾವದನ್ನು ಬೇಡಿಕೊಂಡರೂ ಅದನ್ನು ಭಗವಂತನು ಕೊಡಬಹುದು ; ಆದರೆ ಈ ಬೇಡಿದ ವಸ್ತು ನಮಗೆ ಅನುಕೂಲವಾಗಿರು-ವದೊ, ಪ್ರತಿಕೂಲವಾಗಿರುವದೊ - ಯಾರು ಬಲ್ಲರು? ನಮಗೆ ಈಗ ಬೇಕಾಗಿರುವದೇ ಇನ್ನೊಂದು ಘಳಿಗೆಗೆ ಬೇಡವಾಗಿರುತ್ತದೆಯಲ್ಲ!

'ಬೇಡದಂತೆ ಪರರ ಮಾಡೆನ್ನ ಹರಿಯೆ' ಎಂದಿದ್ದಾರೆ ದಾಸರು. ಬೇಡುವ ಮನಸ್ಸು ಜೋಲುಬೀಳುವದು, ಕುಸಿಯುವದು ; ನಮ್ಮನ್ನು ನಿರ್ಬಲರನ್ನಾಗಿ ಮಾಡುವದು. ಬೇಡುವವನು ಎಂದೆಂದಿಗೂ ಬೇಡುವವನೇ ಆಗಿರುತ್ತಾನೆ; ಕೊನೆಗೆ ಅವನು ಯಾರೊಬ್ಬರಿಗೂ ಬೇಡವಾಗುತ್ತಾನೆ. ಅವನ ಜೀವನವೇ ಅವನಿಗೆ ಬೇಡಿಯಾಗಿಬಿಡುತ್ತದೆ!

ಆದರೆ ಬೇಡುವ ಸ್ಥಲವೊಂದಿದೆ. ಭಗವಂತನನ್ನೇ ನಾವು ಬೇಡಬೇಕು; ಏಕೆಂದರೆ ಅವನು ಸಿರಿರಮಣನು. ಅವನ ದಯೆಯೂ ಐಶ್ವರ್ಯವೂ ಅಕ್ಷಯವಾಗಿರುತ್ತವೆ. ಆದರೂ ಅವನಲ್ಲಿ ನಾವು ಬೇಡುವಾಗ ತಾಯಿತಂದೆಗಳನ್ನು ಕಾಡುವ ಮಕ್ಕಳಂತೆ ಆಗಬಾರದು. ನಮಗೆ ಅದು ಬೇಕು, ಇದು ಬೇಕು- ಎನ್ನುವದಲ್ಲ ನಿಜವಾದ ಬೇಡಿಕೆ. 'ಭಗವಂತ, ನಿನ್ನ ಹಿತವಾಣಿಯು ನನಗೆ ಕೇಳಿಸಲಿ! ನನಗೆ ಸನ್ಮಾರ್ಗವನ್ನು ತೋರಿಸು; ಸದ್ಬುದ್ಧಿಯನ್ನು ದಯಪಾಲಿಸು!' ಎಂದು ಬೇಡಬೇಕು. ಈ ಪ್ರಾರ್ಥನೆಗೊಂದು ಅಕ್ಷಯಪಾತ್ರೆಯು ನಮಗೆ ಆತನಿಂದಲೇ ದೊರೆಯುವದು.



# ೩೩. ತಪ್ಪನ್ನು ಮನ್ನಿಸುವದು

ಭಗವಂತನನ್ನು ಪ್ರಾರ್ಥಿಸುವವರು 'ದಯಾಘನನೆ, ನನ್ನ ತಪ್ಪುಗಳನ್ನು ಕ್ಷಮಿಸು. ನಾನು ಎಷ್ಟಾದರೂ ತಿಳಿವಳಿಕೆ ಸಾಲದವನು ; ನೀನು ಸರ್ವಜ್ಞನೂ ಕರುಣಾಸಾಗರನೂ ಆಗಿರುವೆ. ನನ್ನ ತಪ್ಪಿಗೆ ಇನ್ನು ದಂಡನೆಯನ್ನು ವಿಧಿಸಬೇಡ ! ಹಿಂದಿನ ತಪ್ಪುಗಳನ್ನು ಮನ್ನಿಸು, ಮುಂದೆ ತಪ್ಪು ಮಾಡದಂತೆ ಬಲವನ್ನು ಕೊಡು ! ' ಎಂದು ಬೇಡಿಕೊಳ್ಳುತ್ತಾರೆ. ಈಶ್ವರಪ್ರಾರ್ಥನೆಯನ್ನು ಮಾಡದವರು ಕೂಡ ತಮಗಿಂತ ಮೇಲಿನಂತಸ್ತಿನಲ್ಲಿರುವವರನ್ನು, 'ನಾನು ತಿಳಿಯದೆ ಹೀಗೆ ಮಾಡಿದೆನು, ಕ್ಷಮಿಸಿರಿ!' ಎಂದು ಆಗಾಗ್ಗೆ ಕ್ಷಮಾಪಣೆ ಕೇಳುವದಕ್ಕೆ ಯತ್ನಿಸುತ್ತಿರುತ್ತಾರೆ.

ಆದರೆ ಭಗವಂತನ ನಿಯಮವೊಂದುಂಟು. ಪ್ರಾರ್ಥನೆಗೆ ಮೆಚ್ಚಿ ಭಗವಂತನು ತಪ್ಪನ್ನು ಮನ್ನಿಸುವದಿಲ್ಲ ; ಹೃದಯದಲ್ಲಿ ಆದ ಮಾರ್ಪಾಡಿನಿಂದಲೇ ಆ ದಯಾಘನನ ಕ್ಷಮೆಯ ಫಲವು ತೋರಿಕೊಳ್ಳುತ್ತದೆ. 'ಇನ್ನು ಮುಂದೆ ತಪ್ಪು ಮಾಡದಿರು, ನಿನ್ನನ್ನು ಹಿಂದಿನ ತಪ್ಪುಗಳಿಂದ ಬಿಡುಗಡೆ ಮಾಡುವೆನು ! ' ಎಂಬುದೇ ಆತನ ಬುದ್ಧಿವಾದ. ನಿಮ್ಮ ವಿಷಯದಲ್ಲಿ ಯಾರಾದರೂ ತಪ್ಪುಮಾಡಿರುವರೆಂದು ನಿಮಗೆ ಅನ್ನಿಸುತ್ತಿದೆಯೇನು? ಹಾಗಾದರೆ ತಿಳಿಯದೆ ಅವರು ಹಾಗೆ ಮಾಡಿರಬಹುದೆಂದು ಅವರನ್ನು ಮನ್ನಿಸಿಬಿಡಿರಿ. ಮತ್ತೊಬ್ಬರ ಅಪರಾಧಕ್ಕೆ ದಂಡವನ್ನು ವಿಧಿಸುವ ಯೋಚನೆಯು ನಿಮ್ಮ ಹೃದಯದಿಂದ ದೂರವಾಗಲಿ! ಕೂಡಲೆ ಭಗವಂತನು ಎಂದೆಂದಿಗೂ ನಿಮ್ಮನ್ನು ಸಂಪೂರ್ಣವಾಗಿ ಮನ್ನಿಸಿರುವನೆಂಬುದು ನಿಮಗೇ ಸ್ಫುಟವಾಗಿ ತೋರಿಬರುವದು.



# ೩೪. ಸ್ವಾತಂತ್ರ್ಯ

ನೀವು ಸ್ವಾತಂತ್ರ್ಯದಿನದ ಆಚರಣೆಯಲ್ಲಿ ಭಾಗವಹಿಸಿದ್ದಿರೊ? ಬಹಳ ಸಂತೋಷ. ನಿಮಗೆ ನಿಜವಾಗಿ ಸ್ವಾತಂತ್ರ್ಯವು ಬಂದಿದೆಯೊ? ಸ್ವಾತಂತ್ರ್ಯವೆಂದರೇನೆಂಬುದನ್ನು ಮನಸ್ಸಿನಲ್ಲಿ ಎಂದಾದರೂ ವಿಚಾರ ಮಾಡಿದ್ದೀರೊ?

ಸ್ವಾತಂತ್ರ್ಯವೆಂದರೆ ಸ್ವೇಚ್ಛೆಯಿಂದ ನಡೆಯುವದು - ಎಂಬ ಅಭಿಪ್ರಾಯವು ನಮ್ಮಲ್ಲಿ ಯಾರಿಗೂ ಇಲ್ಲ. ನಾವೆಲ್ಲರೂ ಸ್ವೇಚ್ಛೆಯಿಂದ ನಡೆದುಕೊಂಡರೆ ಆಗ ಸಮಾಜದಲ್ಲಿ ಎಷ್ಟು ಅವ್ಯವಸ್ಥೆಯಾದೀತು ! ಕಳ್ಳರು, ದರೋಡೆಕೋರರು, ಅತ್ಯಾಚಾರಮಾಡುವವರು - ಎಲ್ಲರೂ ಸ್ವತಂತ್ರರೆನ್ನಬಹುದೆ? ಬಹಿರಂಗವಾಗಿ ಅಥವಾ ಅಂತರಂಗದಲ್ಲಿ ಮತ್ತೊಬ್ಬರನ್ನು ಲೆಕ್ಕಿಸದೆ ಸ್ವೇಚ್ಛೆಯಿಂದ ನಡೆಯುವವರಿಗೆಲ್ಲ ಎಷ್ಟೋ ನಿರ್ಬಂಧಗಳೂ ದುಷ್ಫಲಗಳೂ ಕಾದುಕೊಂಡಿರುತ್ತವೆ. ಅವರು ಎಂದಿಗೂ ಸ್ವತಂತ್ರರಲ್ಲ.

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ- ಮುಂತಾದವುಗಳಿಗೆ ವಶನಾಗಿ ನರಳುತ್ತಿರುವವರೆಗೂ ಮನುಷ್ಯನನ್ನು ನಿಜವಾಗಿ ಸ್ವತಂತ್ರನೆನ್ನಬಹುದೆ?

ಹೀಗೆ ನೋಡಿದರೆ ಸರ್ವಥಾ ಸ್ವತಂತ್ರರೆಂಬುವರು ಪ್ರಪಂಚದಲ್ಲಿ ಯಾರೂ ಇಲ್ಲವೇ ಇಲ್ಲವೆನ್ನಬೇಕಾಗುವದು. ಪರತಂತ್ರರಾದ ಜೀವರೆಲ್ಲರನ್ನೂ ಒಂದಾನೊಂದು ಧಾರ್ಮಿಕನಿಯಮಕ್ಕೆ ಕಟ್ಟುಬೀಳಿಸಿ ನಡೆಯಿಸುತ್ತಿರುವ ಭಗವಂತನೊಬ್ಬನೇ ನಿಜವಾಗಿ ಸ್ವತಂತ್ರನು. ಆ ಭಗವಂತನನ್ನು ತಮ್ಮ ಹೃದಯದಲ್ಲಿ ಕಂಡುಕೊಂಡು ಆತನ ನಿಯಮಗಳಿಗೆ ಹೊಂದುಗೆಯಾಗಿಯೇ ಸ್ವಭಾವದಿಂದ ವರ್ತಿಸುತ್ತಿರುವ ಭಗವದ್ಭಕ್ತರೂ ಒಂದರ್ಥದಲ್ಲಿ ಸ್ವತಂತ್ರರು. 'ಸ್ವ' ಎಂದರೆ ತನ್ನಲ್ಲಿರುವ ಪರಮಾತ್ಮನೇ ; ಭಕ್ತಿಯಿಂದ ಅವನಿಗಧೀನರಾಗಿ ಅವನಲ್ಲಿ ಚಿತ್ತವನ್ನು ಒಂದುಗೂಡಿಸಿ ನಡೆಯುವವರೆಲ್ಲರೂ ಸ್ವತಂತ್ರರೇ.



# ೩೫. ಆರೋಗ್ಯವೂ ಸ್ವಾಸ್ಥ್ಯವೂ

ಆರೋಗ್ಯಕ್ಕೂ ಸ್ವಾಸ್ಥ್ಯಕ್ಕೂ ಹೆಚ್ಚುಕಡಿಮೆಯಿದೆ. ಹಲವು ಜನರು ಇವುಗಳಿಗಿರುವ ತಾರತಮ್ಯವನ್ನು ತಿಳಿಯದೆ ಈ ಶಬ್ದಗಳನ್ನು ಉಪಯೋಗಿಸುತ್ತಿರುತ್ತಾರೆ. ರೋಗವಿಲ್ಲದವನು ಆರೋಗನೆನಿಸುತ್ತಾನೆ; ಆರೋಗನಾಗಿರುವ ಸ್ಥಿತಿಯೇ ಆರೋಗ್ಯವು. 'ಸ್ವ' ಎಂದರೆ ತಾನು. 'ಸ್ಥ' ಎಂದರೆ ನಿಂತಿರುವವನು. ತನ್ನಲ್ಲಿ ತಾನು ನಿಂತಿದ್ದರೆ, ತನ್ನ ಸ್ಥಿತಿಯಲ್ಲಿಯೇ ಇದ್ದರೆ ಸ್ವಸ್ಥನೆನಿಸುತ್ತಾನೆ; ಸ್ವಸ್ಥನಾಗಿರುವ ಸ್ಥಿತಿಯೇ ಸ್ವಾಸ್ಥ್ಯವು.

ಯಾವ ರೋಗವೂ ಇಲ್ಲದವರೂ

ರೋಗಗಳು-ಅನ್ನಪಾನಗಳು, ವಾಯುಗುಣ, ಕೆಲಸಕ್ಕಾಗಿ ದುಡಿಯುವದರಿಂದಾದ ಶ್ರಮ - ಮುಂತಾದ ಅನೇಕ ಕಾರಣಗಳಿಂದ ಉಂಟಾಗುತ್ತವೆ. ಈಗಿನ ಕಾಲದಲ್ಲಿ ರೋಗಕ್ಕಿರುವ ಬಾಹ್ಯನಿಮಿತ್ತಗಳನ್ನೆಲ್ಲ ಪರಿಹರಿಸಿಕೊಳ್ಳುವದು ಅಶಕ್ಯವೆಂದೇ ತೋರಹತ್ತಿದೆ. ಒಂದು ವೇಳೆ ಶರೀರದ ರೋಗಗಳನ್ನೆಲ್ಲ ನಾವು ಪರಿಹರಿಸಿಕೊಂಡೇವೆಂದು ಇಟ್ಟುಕೊಂಡರೂ ನಮಗೆ ಸ್ವಾಸ್ಥ್ಯವಿರುವದಿಲ್ಲ. ಏಕೆಂದರೆ ನಮ್ಮ ಮನಸ್ಸಿನಲ್ಲಿಯೂ ಹಲವು ರೋಗಗಳು ಇರುತ್ತವೆ. ದುಷ್ಟಸಂಕಲ್ಪಗಳು, ದುಮ್ಮಾನ, ಹಗೆತನ, ವ್ಯಥೆ, ಕಾಮ, ಕ್ರೋಧ - ಇವೆಲ್ಲವೂ ನಮ್ಮನ್ನು ತಿಕ್ಕಿಮುಕ್ಕುತ್ತಿರುವ ರೋಗಗಳೇ; ಅವುಗಳಿಂದ ನರಳುತ್ತಿರುವವರೆಗೆ ನಮಗೆ ಸ್ವಾಸ್ಥ್ಯವಿಲ್ಲ, ನಮ್ಮಲ್ಲಿ ನಾವು ನೆಲೆನಿಲ್ಲುವದಕ್ಕಿಲ್ಲ.

ಆದರೆ ಎಲ್ಲಾ ರೋಗಗಳಿಗೂ ಪರಿಹಾರವೊಂದಿದೆ. ಭವರೋಗ ವೈದ್ಯನಾದ ಭಗವಂತನು ನಮ್ಮ ಹೃದಯದೊಳಗೇ ಇರುತ್ತಾನೆ. ಆತನ ಕಡೆಗೆ ಮನಸ್ಸನ್ನು ತಿರುಗಿಸಿದರೆ ಸಾಕು, ರೋಗಗಳು ಮಾಯವಾಗುವವು; ನಮಗೆ ಆರೋಗ್ಯವು ಮಾತ್ರವಲ್ಲ, ಸ್ವಾಸ್ಥ್ಯವೂ ಬರುವದು. ಮೊದಲು ಭಗವಂತನನ್ನು ಆಶ್ರಯಿಸಿ ಸ್ವಾಸ್ಥ್ಯವನ್ನು ಪಡೆದುಕೊಳ್ಳಿರಿ; ಆಮೇಲೆ ಎಂದಿಗೂ ರೋಗಗಳ ಹಾವಳಿ ಇಲ್ಲದಂತಾಗುವದು.

❀❀❀

# ೩೬. ನಿಮ್ಮೊಳಗಿನ ಶಕ್ತಿ

ನಿಮ್ಮೊಳಗೆ ಒಂದು ಅದ್ಭುತಶಕ್ತಿಯಿದೆ. ಅದನ್ನು ನೀವು ಕಂಡುಕೊಂಡರೆ ನಿಮ್ಮ ಕಾರ್ಯದಲ್ಲಿ ನಿಮಗೆ ಯಾವಾಗಲೂ ಲಾಭವೇ, ಯಾವಾಗಲೂ ಜಯವೇ.

ನಿಮ್ಮೊಳಗಿನ ಶಕ್ತಿ ಎಂದರೆ ನಿಮ್ಮ ಶರೀರದ ಬಲವಲ್ಲ; ನೀವು ಎಷ್ಟೇ ಶರೀರಬಲವನ್ನು ಸಂಪಾದಿಸಿದರೂ ನಿಮಗಿಂತ ಬಲಶಾಲಿಗಳು ಹುಟ್ಟಿಕೊಳ್ಳಬಹುದು. ನಿಮ್ಮ ಶರೀರಬಲವೂ ಶಾಶ್ವತವಾಗಿ ನಿಲ್ಲಲಾರದು.

ನಿಮ್ಮೊಳಗಿನ ಶಕ್ತಿ ಎಂದರೆ ಸಂಕಲ್ಪಶಕ್ತಿಯಲ್ಲ. ನಿಮ್ಮ ಸಂಕಲ್ಪವು ಬಲವಾದರೆ ಎಷ್ಟೋ ಕಾರ್ಯಗಳು ಕೈಗೂಡಬಹುದು. ನಿಮ್ಮ ಇಚ್ಛೆಯು ಬಹಳ ಪ್ರಬಲವಾಗಿದ್ದರೆ ಆ ಇಚ್ಛೆಯಂತೆಯೇ ನಿಮ್ಮ ಹೊರಜೀವನ ದಲ್ಲಿಯೂ ಸಂನಿವೇಶಗಳು ಒದಗುವದುಂಟು. ಆದರೆ ಅವು ಈಶ್ವರ ನಿಯಮಕ್ಕೆ ಅನುಗುಣವಾಗಿಲ್ಲದಿದ್ದರೆ, ನಿಮ್ಮ ತೋರಿಕೆಯ ಏಳಿಗೆಯು ಕೆಲಕಾಲ ಮಾತ್ರ ಇದ್ದು ಮಾಯವಾಗುವದು. ಆಗ ನಿಮಗೆ ಒದಗುವ ಅನರ್ಥವು ಸಹಿಸಲಾರದಷ್ಟಾದೀತು!

ಆದರೆ ನಿಮ್ಮೊಳಗೆ ಒಂದು ದಿವ್ಯಶಕ್ತಿಯಿದೆ. ಅದು ಭಗವಂತನ ಸಂಸ್ಪರ್ಶದಿಂದ ನಿಮಗೆ ಸಿಕ್ಕುತ್ತದೆ. ನಿಮ್ಮೊಳಗೇ ಇರುವ ಭಗವಂತನನ್ನು ನಾಮಸ್ಮರಣ, ಭಕ್ತಿ, ಧ್ಯಾನಾದಿಗಳಿಂದ ಮುಟ್ಟುವದಕ್ಕೆ ಯತ್ನಿಸಿರಿ; ನಿಮ್ಮ ಮನಸ್ಸನ್ನು ಸಂಸ್ಕರಿಸಿಕೊಳ್ಳಿರಿ. ಆ ಅದ್ಭುತವಾದ ಶಕ್ತಿಯು ಹೊರತೋರಿ ಕೊಳ್ಳುವದು. ನಿಮ್ಮ ಜೀವನದಲ್ಲಿ ಯಾವ ಅಡಚಣೆಗಳೂ ಇಲ್ಲವಾಗುವವು. ಜೀವನವು ಸುಖಮಯವಾಗುವದು.



# ೩೭. ಯಾತ್ರೆಯ ರೈಲು

ಬಹಳ ವರ್ಷಗಳ ಹಿಂದೆ ನಾನು ಬೆಂಗಳೂರಿನಿಂದ ಕಾಶಿಯ ಕಡೆಗೆ ಯಾತ್ರೆಗೆ ಹೋಗುವದಕ್ಕೆಂದು ರೈಲು ಹತ್ತಿದೆ. ಆ ರೈಲಿನಲ್ಲಿ ಬೇರೆಬೇರೆ ಊರುಗಳಿಗೆ ಬೇರೆಬೇರೆಯ ಕೆಲಸಕ್ಕಾಗಿ ಹೋಗುವ ಜನರು ಕುಳಿತಿದ್ದರು. ಅವರು ಮಾತನಾಡುತ್ತಿದ್ದ ವಿಚಾರಗಳು ಅವರವರಿಗೆ ಬೇಕಾದ ವಿಷಯ ಗಳನ್ನು ಕುರಿತಿದ್ದವೆಂದು ಹೇಳಬೇಕಾದದ್ದೇ ಇಲ್ಲ. ಹರಿಹರ, ಮಿರಜ್, ಪುಣೆ - ಇವುಗಳನ್ನು ಮುಟ್ಟಿದ ಮೇಲೆ ನಾಸಿಕಕ್ಕೆ ಹೋದೆ. ಅಲ್ಲಿ ನನಗೆ ಕೆಲವರು ಕಾಶಿಗೆ ಹೋಗುವದಕ್ಕೆಂದು ಹೊರಟಿದ್ದವರ ಜೊತೆಯಾಯಿತು.

ಮುಂದೆಮುಂದೆ ಹೋದಂತೆಲ್ಲ ನಮ್ಮ ರೈಲಿಗೆ ಬರುವ ಜನರು ಕಾಶಿಯ ಕಡೆಗೇ ಹೋಗುವವರಾಗಿದ್ದರು. ಅವರು ಬೇರೆಬೇರೆ ಕಡೆಗಳಿಂದ ಬಂದಿದ್ದರು. ಬೇರೆಬೇರೆಯ ಭಾಷೆಗಳನ್ನು ಆಡುತ್ತಿದ್ದರು ; ಆದರೆ ಎಲ್ಲರೂ ಕಾಶಿಗೆ ಹೋಗುವವರೆಂದು ನಮಗೆ ಗೊತ್ತಾಗುತ್ತಲೂ ನಾವು ಒಬ್ಬರಿ ಗೊಬ್ಬರು ಕಂಡಾಗ ಪರಿಚಿತರಾಗಿಬಿಟ್ಟೆವು. ಕಾಶಿಯಲ್ಲಿ ಒಬ್ಬರನ್ನೊಬ್ಬರು ಕಂಡಾಗ ಒಬ್ಬರ ಯೋಗಕ್ಷೇಮವನ್ನೊಬ್ಬರು ವಿಚಾರಿಸಿಕೊಳ್ಳುತ್ತಿದ್ದೆವು. ಆಗ ನಾವೆಲ್ಲ ವಿಶ್ವನಾಥನ ಕುಟುಂಬದವರೇ ಆಗಿಬಿಟ್ಟಿದ್ದೆವು!

ನಮಗೆ ತಿಳಿಯದೆಯೇ ನಾವೆಲ್ಲರೂ ಭಗವಂತನ ದಾರಿಯಲ್ಲಿ ಕಾಲಿಟ್ಟಿದ್ದೇವೆ. ಕೆಲವರು ಸುತ್ತುದಾರಿಯಿಂದ ಕಾಶಿಗೆ ಬರುತ್ತಾರೆ ; ಮತ್ತೆ ಕೆಲವರು ನೇರಾಗಿ ಬರುತ್ತಾರೆ. ಕೊನೆಗೆ ಎಲ್ಲರೂ ಕಾಶಿಗೇ ಬಂದು ಸೇರುತ್ತಾರೆ. ಕಾಶಿಯು ನಮ್ಮ ಹೃದಯದಲ್ಲಿದೆ, ಅಲ್ಲಿ ವಿಶ್ವನಾಥನೆಂಬ ಪರಮಾತ್ಮನು ಇದ್ದಾನೆ. ಭಗವದ್ಭಕ್ತಿ ಎಂಬುದೇ ಕಾಶಿಗೆ ಹೋಗುವ ರೈಲು.



## ೩೮. ಭಗವಂತನ ಯಂತ್ರವಾಗುವದು

ಬಹುಜನರಿಗೆ ದೇವರೆಂದರೆ ಸಮಯಬಂದಾಗ ಉಪಯೋಗಿಸಿಕೊಳ್ಳುವ ಒಂದು ಪದಾರ್ಥ. ರೋಗವು ಬಂದವರು ವಾಯುಗುಣವನ್ನು ಬದಲಾಯಿಸುವದಕ್ಕೆಂದು ಬೇರೊಂದೂರಿಗೆ ಕೆಲವು ದಿನಗಳ ಮಟ್ಟಿಗೆ ಹೋಗಿಬರುವಂತೆ ಜನರು ತಮಗೆ ಹಣಕಾಸಿನ, ಆರೋಗ್ಯದ, ಜನಸಹಾಯದ, ಅಧಿಕಾರದ, ವಿದ್ಯೆಯ ಅಥವಾ ಕೀರ್ತಿಯ ಕೊರತೆಯು ಕಂಡುಬಂದಾಗ ದೇವರ ದರ್ಶನಕ್ಕೆ ಹೋಗುವರು, ದೇವರಿಗೆ ಹಣ್ಣುಕಾಯಿ ಒಪ್ಪಿಸುವರು, ದೇವರಿಗೆ ಮೀಸಲು ತೆಗೆದಿಡುವರು ಅಥವಾ ಹರಕೆಹೊರುವರು !

ಆದರೆ ದೈವಸಂಪತ್ತಿನ ಜನರ ಮಾರ್ಗವು ಬೇರೆಯಿರುತ್ತದೆ. ಅವರಿಗೆ ಈ ಜೀವನಕ್ಕೆ ಆಧ್ಯಾತ್ಮಿಕೋನ್ನತಿಯೇ ಗುರಿ - ಎಂಬುದು ಹೊಳೆದಿರುವದು. ತಾವು ಹೇಗಾದರೂ ಭಗವಂತನು ಉಪಯೋಗಿಸುವ ಒಂದು ಯಂತ್ರವಾಗಬೇಕು, ಆತನಿಗೊಂದು ಉಪಕರಣವಾಗಬೇಕು - ಎಂಬುದು ಅವರ ಹಂಬಲಿಕೆ. ಅವರಿಗೆ ಅನ್ನನೀರಿನ ಚಿಂತೆಯಿರುವದಿಲ್ಲ, ಆರೋಗ್ಯದ ಚಿಂತೆಯಿರುವದಿಲ್ಲ , ಹಣಕಾಸಿನ ಚಿಂತೆಯಿರುವದಿಲ್ಲ , ಅವರಿಗೆ ಮತ್ತೆ ಯಾವ ಚಿಂತೆಯೂ ಇರುವದಿಲ್ಲ. 'ನಾನು ಈ ಲೋಕದಲ್ಲಿ ಏನನ್ನಾದರೂ ಗಳಿಸಿಬಿಡುವದಕ್ಕೆ ಹುಟ್ಟಿಲ್ಲ. ಈಶ್ವರನಿಗೆ ಒಂದು ಉಪಕರಣವಾಗಿ ಬಾಳುವದೇ ನನ್ನ ಗುರಿ !'- ಎಂಬುದು ಅವರ ಭಾವ. ಆದ್ದರಿಂದ ಅವರು ಅಧ್ಯಾತ್ಮಗ್ರಂಥಗಳ ಪಠನ, ಈಶ್ವರತತ್ತ್ವದ ವಿಚಾರ, ಭಗದವದ್ಭಕ್ತರ ಸಹವಾಸ - ಇವುಗಳನ್ನು ಮೊದಲು ಹುಡುಕುವರು. ಅಧ್ಯಾತ್ಮಜೀವನದಿಂದಲೇ ಅವರ ಯೋಗಕ್ಷೇಮವೆಲ್ಲವೂ ಕಟ್ಟಿಟ್ಟ ಬುತ್ತಿಯಾಗುವದು. ಏಕೆಂದರೆ ಆಗ ಭಗವಂತನೇ ಅದಕ್ಕೆ ಹೊಣೆಯಾಗುತ್ತಾನೆ.

# ೩೯. ಭಗವಂತನಲ್ಲಿ ನಾವೆಲ್ಲರೂ ಒಂದೇ

ಒಂದು ಮರಕ್ಕೆ ಎಲ್ಲಾ ಕಡೆಗಳಲ್ಲಿಯೂ ಕೊಂಬೆಗಳು ಹರಡಿಕೊಂಡಿರುತ್ತವೆ. ಆ ಕೊಂಬೆಗಳೂ ಅವುಗಳ ಕವಲುಗಳೂ ಗಾತ್ರ, ಉದ್ದ, ಎಲೆಗಳ ಸಂಖ್ಯೆ, ಹೂಗಳು, ಹಣ್ಣುಗಳು - ಇವುಗಳ ದೃಷ್ಟಿಯಿಂದ ನೋಡಿದಾಗ ಬೇರೆ ಬೇರೆಯಾಗಿರುತ್ತವೆ. ಕೆಲವು ಕೊಂಬೆಗಳು ಸಣ್ಣವು, ಕೆಲವು ದೊಡ್ಡವು, ಕೆಲವು ಉದ್ದ, ಕೆಲವು ಗಿಡ್ಡ, ಕೆಲವು ಕೊಂಬೆಗಳಲ್ಲಿ ಹೂಹಣ್ಣುಗಳು ಜಗಿಯುತ್ತಿವೆ, ಕೆಲವು ಕೊಂಬೆಗಳಲ್ಲಿ ಕಡಿಮೆ, ಮತ್ತೆ ಕೆಲವು ಕೊಂಬೆಗಳಲ್ಲಿ ಇಲ್ಲವೇ ಇಲ್ಲ. ಆದರೂ ಅವೆಲ್ಲ ಒಂದೇ ಮರದ ಕೊಂಬೆಗಳು. ಅವೆಲ್ಲಕ್ಕೂ ಕೆಳಗಿನ ಬೇರೇ ಆಧಾರ; ಆ ಬೇರಿನ ಮೂಲಕವೇ ಅವು ತಮ್ಮ ಪೋಷಕಸಾಮಗ್ರಿಯನ್ನು ಪಡೆಯುತ್ತಿರುವವು.

ಹೀಗೆಯೇ ನಾವು ಮೇಲೆಮೇಲೆ ನೋಡಿದಾಗ ವಯಸ್ಸು, ಲಿಂಗ, ಜಾತಿ, ಮತ, ಕುಲ, ರೂಪ, ವಿದ್ಯೆ, ಬುದ್ಧಿ, ಅಧಿಕಾರ, ಐಶ್ವರ್ಯ, ಆರೋಗ್ಯ - ಮುಂತಾದವುಗಳ ದೃಷ್ಟಿಯಿಂದ ಬೇರೆಬೇರೆಯಾಗಿರುವೆವು. ಆದರೂ ನಾವೆಲ್ಲರೂ ಒಂದೇ ಬೇರಿನಿಂದ ಪೋಷಣವನ್ನು ಪಡೆಯುತ್ತಿರುವೆವು. ಪರಮಾತ್ಮನೇ ಆ ಬೇರು. 'ಭಗವಂತನೆಂಬ ಬೇರಿನಿಂದ ಹುಟ್ಟಿ ಬೆಳೆದುಬಂದಿರುವವನು ನಾನು; ಆತನೇ ನನ್ನ ಸ್ಥಿತಿಗಳಿಗೆ ಮೂಲವು. ಈ ವಿಷಯದಲ್ಲಿ ನಾನು ಯಾವ ಚಕ್ರವರ್ತಿಗಿಂತಲೂ ಬೇರೆಯಲ್ಲ. ಯಾವ ವಿದ್ವಾಂಸನಿಗಿಂತಲೂ ಬೇರಯಲ್ಲ. ಯಾವ ಮಹಾತ್ಮನಿಗಿಂತಲೂ ಬೇರೆಯಲ್ಲ' - ಎಂಬುದನ್ನು ಅನುದಿನವೂ ಮನಸ್ಸಿಗೆ ತಂದುಕೊಳ್ಳುತ್ತಿರಿ; ನಿಮ್ಮ ಜೀವನವು ಸುಖಮಯವಾಗಿರುವದು.

# ೪೦. ಬಡತನವನ್ನು ಕಳೆದುಕೊಳ್ಳುವದಕ್ಕೆ ಉಪಾಯ

ಬಡತನವೆಂದರೇನು ? ಕೈಯಲ್ಲಿ ಹಣವಿಲ್ಲದವಸ್ಥೆಯೇ ಬಡತನವೆಂದು ಅನೇಕರ ನಂಬಿಕೆ. ಆದ್ದರಿಂದ ಯಾವದಾದರೊಂದು ಉಪಾಯದಿಂದ ಹಣವನ್ನು ಗಳಿಸಿದರೆ ನಮ್ಮ ಬಡತನದ ವ್ಯಥೆಯು ಹಿಂಗೀತು - ಎಂದು ಅವರು ಯೋಚಿಸುವರು.

ಈ ಭಾವನೆಯಲ್ಲಿ ಸ್ವಲ್ಪ ನಿಜದ ಅಂಶವೂ ಇದೆ. ನಾಳೆಗೇನು, ನಾಡದ್ದಿಗೇನು ? - ಎಂಬ ಚಿಂತೆಯಲ್ಲಿ ಮುಳುಗಿರುವ ದೊಡ್ಡ ಕುಟುಂಬಿಯೊಬ್ಬನಿಗೆ ತಟ್ಟನೆ ಒಂದು ಸಾವಿರರೂಪಾಯಿಗಳು ಸಿಕ್ಕಿದರೆ ಅವನಿಗೆ ಕೂಡಲೆ ಮೊದಲಿನ ಇಳಿಬಗೆಯು ಇಲ್ಲವಾಗುವದು. ಅವನು ಹರ್ಷದಿಂದ ಎಲ್ಲಾ ಕಾರ್ಯಗಳನ್ನೂ ಮಾಡುವದಕ್ಕೆ ಸಿದ್ಧನಾಗುವನು. ಎಲ್ಲರನ್ನೂ ಉಲ್ಲಾಸಯುಕ್ತವಾದ ಮುಖದಿಂದ ಕಾಣುವನು. ಆದರೆ ಇದು ಬಹುಕಾಲವಿರುವದಿಲ್ಲ. ಏಕೆಂದರೆ ಕೈಗೆ ಹಣವು ಸಿಕ್ಕಿದಮೇಲೆ ಅವನಿಗೆ ಮತ್ತೆ ಬೇರೆಬಗೆಯ ಯೋಚನೆಗಳು ಹತ್ತಿಕೊಳ್ಳುವವು. ಆ ಹಣವೂ ಬಹುಕಾಲ ಅವನಲ್ಲಿ ಉಳಿಯಲಾರದು. ಮತ್ತೆ ಮೊದಲಿನ ಬಡತನದ ಬವಳಿಯು ಅವನ ಮೇಲೆ ದಾಳಿಯಿಕ್ಕುವದು !

ಬಡತನವೆಂದರೆ 'ಅದು ಬೇಕು, ಇದು ಬೇಕು ; ನನ್ನಲ್ಲಿ ಸುಖಕ್ಕೆ ಬೇಕಾದಷ್ಟು ಸಲಕರಣೆಯಿಲ್ಲ , ಅದನ್ನು ಸಂಪಾದಿಸಿಕೊಂಡಹೊರತು ನನಗೆ ಉಳಿಗಾಲವಿಲ್ಲ' ಎಂಬ ಮನಃಸ್ಥಿತಿ. ಹಣವಿರಲಿ, ಇಲ್ಲದಿರಲಿ ; ಆಸ್ತಿಯು ಹೇರಳವಾಗಿರಲಿ, ಇಲ್ಲದಿರಲಿ - ಈ ಬಡತನವು ಗೋಳುಗುಟ್ಟಿಸುತ್ತಲೇ ಇರಬಹುದು. ಬಡತನವೆಂಬುದು ಮನಸ್ಸಿಗೆ ಹತ್ತಿದ ಒಂದು ರೋಗ.

'ಲಕ್ಷ್ಮೀವಲ್ಲಭನಾದ ಭಗವಂತನೇ ಆಶ್ರಯನಾಗಿರುತ್ತಾನೆ; ನಮಗೇನು ಕೊರತೆ!' ಈ ಯೋಚನೆಯನ್ನು ಮನಸ್ಸಿನಲ್ಲಿ ಹೊರಳಾಡಿಸುತ್ತಿರಿ. ನಿಮ್ಮನ್ನು ಯಾವ ಬಡತನದ ಸಂಕಟವೂ ಗೋಳುಗುಟ್ಟಿಸುವದಿಲ್ಲ.

# ೪೧. ಸಂಕಟದಲ್ಲಿ ವೆಂಕಟರಮಣ

ನೀವು ಬಹಳ ಸಂಕಷ್ಟಗಳಿಗೆ ಸಿಕ್ಕಿಬಿದ್ದಿದ್ದೀರ ! ಮುಂದೇನು ಮಾಡಬೇಕೆಂಬುದು ನಿಮಗೆ ತೋಚದೆ ಇದೆಯೆ ? ಕಷ್ಟದಿಂದ ಪಾರಾಗುವದಕ್ಕೆ ನೀವು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾಗಿದೆಯೆ ?

ಹೆದರಬೇಡಿರಿ. ನಿಮ್ಮ ಪ್ರಯತ್ನಕ್ಕೆ ಮೀರಿದ್ದನ್ನು ಸಾಧಿಸಿಕೊಡುವದಕ್ಕೆ ಒಬ್ಬ ಭಗವಂತನು ಇರುತ್ತಾನೆ. ಅವನು ಇಲ್ಲಿಯೇ ಇರುತ್ತಾನೆಂಬುದನ್ನು ಮನಸ್ಸಿನಲ್ಲಿ ತಂದುಕೊಳ್ಳಿರಿ. ಭಗವಂತನು ನಿಮ್ಮ ಒಳಗೂ ಹೊರಗೂ ಎಲ್ಲೆಲ್ಲಿಯೂ ಇರುತ್ತಾನೆಂಬುದು ಮಾತ್ರವೇ ಅಲ್ಲ ; ನಿಮ್ಮ ಕಷ್ಟಗಳನ್ನೆಲ್ಲ ಪಾರುಮಾಡಿಸಲು ಶಕ್ತನಾಗಿರುತ್ತಾನೆ, ನಿಮ್ಮನ್ನು ಉದ್ಧಾರಮಾಡುವದಕ್ಕೂ ಸಿ

ಭಗವಂತನು ಎಲ್ಲಿದ್ದಾನೆ ? ನನಗೆ ಕಾಣಿಸಲಿಲ್ಲವಲ್ಲ ! - ಎಂದು ಚಿಂತಿಸಬೇಡಿ. ನಿಮಗೆ ಕಾಣಿಸದಿದ್ದರೂ ತಮ್ಮ ವ್ಯಾಪಾರವನ್ನು ಕಾರ್ಯದ ಮೂಲಕ ತೋರಿಸುವ ಶಕ್ತಿಗಳು ಎಷ್ಟೋ ಇವೆಯಲ್ಲವೆ ? ವಿದ್ಯುಚ್ಛಕ್ತಿಯು ಹೇಗಿರುವದೆಂಬುದು ನಿಮಗೆ ಗೊತ್ತಿರದೆ ಇರಬಹುದು. ಆದರೆ ಅದರಿಂದಾಗುವ ಕಾರ್ಯಗಳ ಲಾಭವನ್ನು ನೀವೆಲ್ಲರೂ ಅನುಭವಿಸ ಬಹುದಲ್ಲವೆ ? 'ಭಗವಂತನು ಈಗಲೇ ಇಲ್ಲಿಯೇ ಇರುತ್ತಾನೆ ; ಅವನ ಸರ್ವಜ್ಞಚಿತ್ತದಂತೆಯೇ ಎಲ್ಲವೂ ನಡೆಯುತ್ತಿದೆ. ನಾನು ಅವನ ಆಸರೆಯಲ್ಲಿಯೇ ಇದೇನೆ ' ಎಂಬುದನ್ನು ದೃಢವಾಗಿ ನಂಬಿರಿ. ನಿಮ್ಮ ವ್ಯವಹಾರವನ್ನು ಮಾಡುವಾಗ ಆತನ ಬೆಂಬಲವಿದೆ - ಎಂದೇ ನಂಬಿ ಮುಂದುವರೆಯಿರಿ. ನಿಮ್ಮ ಸಂಕಷ್ಟಗಳು ಪರಿಹಾರವಾಗುವವು, ಜೀವನವು ಸುಖಮಯವಾಗುವದು !

# ೪೨. ಶ್ರೀ ಭಗವಾನುವಾಚ

ಭಗವದ್ಗೀತೆಯನ್ನು ಓದಿದ್ದೀರೊ? ಅದರಲ್ಲಿ ಆಗಾಗ್ಗೆ 'ಶ್ರೀಭಗವಾನುವಾಚ '' (ಶ್ರೀಭಗವಂತನಿಂತೆಂದನು) ಎಂಬ ವಾಕ್ಯವು ಬರುತ್ತಲೇ ಇರುತ್ತದೆ. ಭಗವದ್ಗೀತೆಯೆಲ್ಲ ಭಗವಂತನ ಮಾತೇ ಆಗಿರುವಾಗ ಈ ವಾಕ್ಯವನ್ನು ಅಲ್ಲಲ್ಲಿ ಹೇಳಿರುವದೇಕೆ ? ಈ ಪ್ರಶ್ನೆಯನ್ನು ನೀವು ಎಂದಾದರೂ ನಿಮಗೆ ನೀವೇ ಹಾಕಿಕೊಂಡಿದ್ದೀರಾ ? ಇಲ್ಲದಿದ್ದರೆ, ಈಗಲಾದರೂ ಈ ಪ್ರಶ್ನೆಗೆ ಉತ್ತರವೇನೆಂಬುದನ್ನು ಸ್ವಲ್ಪ ಯೋಚಿಸಿರಿ. ಅದರಿಂದ ನಿಮಗೆ ಪ್ರಯೋಜನವುಂಟು.

ಈ ಪ್ರಶ್ನೆಗೆ ನನ್ನ ಉತ್ತರವಿದು : ಗ್ರಂಥವನ್ನು ಓದುತ್ತಾ ಓದುತ್ತಾ ನಮಗೆ ಇದು ಭಗವಂತನ ವಾಕ್ಯ - ಎಂಬ ನೆನಪು ಹಾರಿಹೋಗಬಹುದು. ಆಗ ಭಗವಂತನ ಉಪದೇಶದ ಫಲವು ಪೂರ್ಣವಾಗಿ ಸಿಕ್ಕದೆ ಹೋಗಬಹುದು. ಆದ್ದರಿಂದ ಶ್ರೀವೇದವ್ಯಾಸರು ಬಹುಮುಖ್ಯವಾದ ವಾಕ್ಯಗಳನ್ನು ಬರೆಯುವ ಮುಂಚೆ 'ಭಗವಂತನು ಹೇಳುತ್ತಿದ್ದಾನೆ' ಎಂದು ನಮಗೆ ನೆನಪು ಕೊಟ್ಟಿರುತ್ತಾರೆ. ಈ ವಾಕ್ಯವನ್ನು ಭಗವಂತನೇ ನನಗೆ ಉಪದೇಶಿಸುತ್ತಿರುತ್ತಾನೆ - ಎಂಬ ಭಾವನೆಯಿಂದ ಓದಿರಿ; ಆಗ ಉಪದೇಶವು ನಿಮ್ಮ ಹೃದಯದೊಳಕ್ಕೆ ಹೋಗಿ ಅಲ್ಲಿ ಬೇರುಬಿಟ್ಟುಕೊಂಡು ಫಲಪರ್ಯಂತವಾಗುವದು. ಉದಾಹರಣೆಗೆ ಈ ವಾಕ್ಯವು ಭಗವಂತನು ಹೇಳಿರುವದು:

**''ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ''**

(ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಂಡು ಯಾವ ಭಕ್ತರು ಹೆಚ್ಚಿನ ಶ್ರದ್ಧೆಯಿಂದೊಡಗೂಡಿ ಎಂದೆಂದಿಗೂ ನನ್ನಲ್ಲಿಯೇ ಯುಕ್ತರಾಗಿರುವರೋ ಅವರೇ ಯೋಗಿಗಳಲ್ಲಿ ಶ್ರೇಷ್ಠರು - ಎಂಬುದು ನನ್ನ ಮತವು.)

❁❁❁

# ೪೩. ಗೀತೆಯಲ್ಲಿ ಭಗವಂತನ ಉಪದೇಶ

ಗೀತೆಯಲ್ಲಿ ಅರ್ಜುನನಿಗೆ ಭಗವಂತನು ಕೆಲವು ಉಪದೇಶಗಳನ್ನು ಮಾಡಿರುತ್ತಾನೆ. ಗೀತೆಯನ್ನು ಮನಮುಟ್ಟಿ ಓದುವವರು ಆ ಕಾಲಕ್ಕೆ ' ಈ ಉಪದೇಶವು ನನಗೇ ' ಎಂದು ಭಾವಿಸಬೇಕು. ಅದರಿಂದ ಜೀವನದಲ್ಲಿ ಬಹಳ ಸಹಾಯವಾಗುತ್ತದೆ. ನಿಮಗೆ ಸದ್ಗುರುಗಳು ಇನ್ನೂ ಸಿಕ್ಕಿಲ್ಲವೆ ? ಅಂಜದಿರಿ. ಗೀತೆಯಲ್ಲಿ ನಿಮಗೆ ಮೆಚ್ಚಾಗಿ ಕಾಣುವ ಯಾವದಾದರೊಂದು ಉಪದೇಶವನ್ನು ಸದ್ಗುರುವಿನ ಉಪದೇಶವೆಂದೇ ಭಾವಿಸಿರಿ, ಅದರಂತೆ ಅನುಷ್ಠಾನವನ್ನು ಮಾಡುವದಕ್ಕೆ ಪ್ರಾರಂಭಿಸಿರಿ.

(೧) ''ಸಂಭಾವಿತನಾದವನಿಗೆ ಅಪಕೀರ್ತಿಯು ಮರಣಕ್ಕಿಂತಲೂ ಹೆಚ್ಚು (೨) ಕರ್ಮದಲ್ಲಿಯೇ ನಿನಗೆ ಅಧಿಕಾರವು, ಫಲದಲ್ಲಿಲ್ಲ ; ಕರ್ಮಫಲವನ್ನನುಭವಿಸುವದಕ್ಕೆ ಹಂಬಲಿಸದಿರು, ಕರ್ಮವನ್ನು ಬಿಟ್ಟು ಕೂಡಲೂಬೇಡ (೩) ಪ್ರಯತ್ನಮಾಡುತ್ತಿದ್ದರೂ ಇಂದ್ರಿಯಗಳು ಮನಸ್ಸನ್ನು ಬಲಾತ್ಕಾರದಿಂದ ಅಪಹರಿಸುವವು ; ಅವುಗಳನ್ನೆಲ್ಲ ಬಿಗಿಹಿಡಿದುಕೊಂಡು ಭಗವಂತನಲ್ಲಿಯೇ ನಿಲ್ಲಿಸಬೇಕು (೪) ನಿತ್ಯಕರ್ಮಗಳನ್ನು ಬಿಡದೆ ಮಾಡು, ಕರ್ಮವನ್ನು ಮಾಡುವದೇ ಅಕರ್ಮಕ್ಕಿಂತ ಮೇಲು ; ಕರ್ಮವಿಲ್ಲದಿದ್ದರೆ ಶರೀರಯಾತ್ರೆಯು ಕೂಡ ಸಿದ್ಧಿಸದು''.

ಇಂಥ ಉದಾಹರಣೆಗಳು ಹಲವು ಇವೆ. 'ಇದು ನನಗೆ ಹೇಳಿದ್ದು' ಎಂದು ಯಾವದೆನಿಸುವದೊ ಅದನ್ನು ಅನುಷ್ಠಾನಕ್ಕೆ ಇಟ್ಟುಕೊಳ್ಳಬೇಕು. ಮುಂದಕ್ಕೇನು ಮಾಡಬೇಕೆಂಬುದು ನಿಮಗೆ ಕಾಲಕ್ರಮದಲ್ಲಿ ತಾನೇ ಹೊಳೆಯುತ್ತದೆ.



# ೪೪. ಹೃದ್ರೋಗ

ಋಗ್ವೇದದಲ್ಲಿ ಒಂದು ಮಂತ್ರವಿದೆ. 'ಸೂರ್ಯನೆ, ನನ್ನ ಹೃದ್ರೋಗವನ್ನೂ ಮೈಯ್ಯಹಸುರನ್ನೂ ನಾಶಗೊಳಿಸು' - ಎಂಬುದು ಅದರಲ್ಲಿರುವ ಒಂದು ವಾಕ್ಯದ ಅರ್ಥ. ಈ ಮಂತ್ರವನ್ನು ಜಪಮಾಡುತ್ತಾ ಅನೇಕರು ಭಕ್ತಿಯಿಂದ ಸೂರ್ಯನಮಸ್ಕಾರವನ್ನು ಮಾಡುತ್ತಾರೆ; ಅದರಿಂದ ಅವರಿಗೆ ಅನೇಕ ರೋಗಗಳು ಪರಿಹಾರವಾಗುವವೆಂದು ವೈದಿಕರ ನಂಬಿಕೆ.

ಈಗಿನ ಕಾಲಕ್ಕೆ ಅನೇಕರಿಗೆ ಹೃದ್ರೋಗವೊಂದು ಹೆಚ್ಚಾಗುತ್ತಿರುವಂತೆ ಕಾಣಿಸುತ್ತಿದೆ. ಎಷ್ಟೋ ಜನರು ಹೃತ್ಕ್ರಿಯೆ ನಿಂತು ಸತ್ತುಹೋದರೆಂದು ಆಗಾಗ್ಗೆ ವೃತ್ತಾಂತಪತ್ರಿಕೆಗಳಲ್ಲಿ ಪ್ರಕಟವಾಗುವ ಸುದ್ದಿಯನ್ನು ನೀವು ಕೇಳಿರಬಹುದು. ಈ ರೋಗಕ್ಕೆ ಕಾರಣವೇನೋ, ವೈದ್ಯರೇ ಹೇಳಬೇಕು. ಆದರೆ ಆರೋಗ್ಯದಿಂದ ಬದುಕಿರುವೆವೆಂದು ತಿಳಿದುಕೊಂಡಿರುವ ಅನೇಕರಲ್ಲಿ ಒಂದು ಹೃದ್ರೋಗವಿರುತ್ತದೆ. ಮನುಷ್ಯರ ಹೃದಯದೊಳಗೆ ಸೂರ್ಯಪ್ರಕಾಶಕ್ಕಿಂತಲೂ ಹೆಚ್ಚಿನ ಪ್ರಕಾಶವುಳ್ಳ ಜ್ಞಾನಸೂರ್ಯನು ಉದಯಿಸುವದಕ್ಕೆ ಅವಕಾಶವಿದೆ. ಆದರೆ 'ಅಭಕ್ತಿ' ಎಂಬ ಹೃದ್ರೋಗವೊಂದು ಅದಕ್ಕೆ ಅಡ್ಡಿಯಾಗಿದೆ. ನಮ್ಮಲ್ಲಿ ಅನೇಕರಿಗೆ ಇದು ಇದ್ದುಕೊಂಡಿರುತ್ತದೆ. ''ಭಗವಂತನೆ, ಕೋಟಿ ಸೂರ್ಯಪ್ರಕಾಶನೆ, ನನ್ನ ಹೃದ್ರೋಗವನ್ನು ಪರಿಹರಿಸು. ನೀನು ನಮ್ಮೆಲ್ಲರ ಹೃದಯದಲ್ಲಿಯೂ ನೆಲೆಸಿರುವೆ - ಎಂಬ ಶಾಸ್ತ್ರದ ಉಪದೇಶವನ್ನು ನಂಬುವ ದೃಢವಿಶ್ವಾಸವನ್ನು ನನಗೆ ಅನುಗ್ರಹಿಸು !'' ಎಂದು ಎಡೆಬಿಡದೆ ಬೇಡಿಕೊಳ್ಳುತ್ತಿರಿ. ನಿಮ್ಮ ಹತ್ತಿರಕ್ಕೆ ಯಾವ ಹೃದ್ರೋಗವೂ ಸುಳಿಯದೆ ಇರುತ್ತದೆ.



# ೪೫. ಕುಪ್ಪಿಯ ಮಾತ್ರೆ

ಕುಪ್ಪಿಯ ಮಾತ್ರೆಗಳನ್ನು ಪೂರ್ವದಲ್ಲಿ ಐಶ್ವರ್ಯವಂತರು ಮಾತ್ರ ಮಾಡಿಸುತ್ತಿದ್ದರು. ವೈದ್ಯರು ಆ ಮಾತ್ರೆಗಳಿಗೆ ಬೇಕಾದ ಸಾಮಗ್ರಿಗಳನ್ನೆಲ್ಲ ತರಿಸಿಕೊಂಡು, ಅವುಗಳನ್ನು ಸಾವಕಾಶವಾಗಿ ಭಗವಂತನನ್ನು ಸ್ಮರಣೆಮಾಡುತ್ತಾ ಸಜ್ಜುಗೊಳಿಸುತ್ತಿದ್ದರಂತೆ. ಮನೆಯ ಯಜಮಾನನು ದೇವರ ಪೂಜೆಯನ್ನು ಭಕ್ತಿಯಿಂದ ಮಾಡಿಸುವದು, ಸಾತ್ತ್ವಿಕರಾದ ಬ್ರಾಹ್ಮಣರಿಂದ ಅಧ್ಯಯನ ಮಾಡಿಸುವದು, ದೇವರಿಗೆ ಮಹಾನೈವೇದ್ಯವನ್ನು ಮಾಡಿಸಿ ಪಾತ್ರರಾದವರಿಗೆ ಅನ್ನಸಂತರ್ಪಣೆ ಮಾಡಿಸುವದು - ಹೀಗೆ ಭಗವಂತನ ಪ್ರಸನ್ನತೆಗೆಂದು ಮಹಾ ಪ್ರಯತ್ನವನ್ನು ಮಾಡುತ್ತಿದ್ದರಂತೆ. ದೀರ್ಘಕಾಲವಾದಬಳಿಕ ವೈದ್ಯರು ಯಜಮಾನನಿಗೆ ಆ ಮಾತ್ರೆಯನ್ನು ಉಪಯೋಗಿಸಿ ರೋಗಪರಿಹಾರವನ್ನು ಮಾಡಿದ ಬಳಿಕ ವೈದ್ಯಭಾಗವೆಂದು ತಮ್ಮಲ್ಲಿ ಉಳಿಸಿಕೊಂಡ ಭಾಗದಿಂದ ಬೇರೆಬೇರೆಯ ರೋಗಗಳನ್ನು ಪರಿಹಾರ ಮಾಡುವುದಕ್ಕೆಂದು ಬೇರೆಬೇರೆಯ ಅನುಪಾನಸಹಿತವಾಗಿ ಬಡಬಗ್ಗರಿಗೆ ಪ್ರಯೋಗಿಸುತ್ತಿದ್ದರಂತೆ.

ಭಗವಂತನ ನಾಮ ಎಂಬುದೊಂದು ಉತ್ತಮವಾದ ಕುಪ್ಪಿಯಮಾತ್ರೆ. ಇದನ್ನು ದೈವೀಸಂಪತ್ತಿನ ಋಷಿಗಳು ದೀರ್ಘಕಾಲದವರೆಗೆ ಪ್ರಯೋಗಿಸಿ ಸಿದ್ಧಮಾಡಿಟ್ಟಿರುತ್ತಾರೆ. ಈಗಲೂ ಕೆಲವರು ಮಹನೀಯರುಗಳಲ್ಲಿ ವೈದ್ಯ ಭಾಗದಂತೆ ಅದರ ಮಹತ್ತ್ವವು . ಅಚ್ಚಳಿಯದೆ ಉಳಿದುಕೊಂಡಿದೆ. ಶ್ರದ್ಧಾಭಕ್ತಿರೂಪವಾದ ಅನುಪಾನದಿಂದ ಅಂಥವರು ನಮ್ಮ ಉಪಯೋಗಕ್ಕೆ ಅದನ್ನು ಅನುಗ್ರಹಿಸಿಕೊಟ್ಟರೆ ನಮ್ಮ ಸಂಸಾರದ ಅನರ್ಥಕರವಾದ ಹಲವು ಮನೋರೋಗಗಳು ಹುಟ್ಟಡಗಿಹೋಗುವವು.

❖❖❖

# ೪೬. ವಾದವೂ ವೇದವೂ

ಒಂದು ಕಡೆಯಲ್ಲಿಇಬ್ಬರು ಸಸ್ಯಶಾಸ್ತ್ರಜ್ಞರು ಸೇರಿ ಗುಲಾಬಿಯ ಹೂವನ್ನು ಕುರಿತು ಚರ್ಚೆಗೆ ಆರಂಭಿಸಿದರು. ಇಬ್ಬರಿಗೂ ಶಾಸ್ತ್ರದಲ್ಲಿ ತಾವು ಪರಿಣತರೆಂಬ ಅಭಿಮಾನವು ಬಲವಾಗಿತ್ತು. ದೊಡ್ಡದೊಡ್ಡ ಗ್ರಂಥಗಳ ವಾಕ್ಯಗಳ ಆಧಾರವನ್ನು ಕೊಟ್ಟು ಇಬ್ಬರೂ ತಮ್ಮ ತಮ್ಮ ಅಭಿಪ್ರಾಯವನ್ನು ಪುಷ್ಟಿಗೊಳಿಸುವದಕ್ಕೆ ಪ್ರಯತ್ನಿಸುತ್ತಿದ್ದರು. ಚರ್ಚೆಯು ಬರುಬರುತ್ತಾ ಬಲವಾಯಿತು. ಇಬ್ಬರಲ್ಲಿ ಯಾರೊಬ್ಬರೂ ತಮ್ಮ ತಮ್ಮ ಪಕ್ಷವನ್ನು ಬಿಟ್ಟು ಕೊಡಲು ಒಪ್ಪಲಿಲ್ಲ. 'ಶೇಷಂ ಕೋಪೇನ ಪೂರಯೇತ್' ಎಂಬ ಗಾದೆಯು ಅವರ ವಿಷಯಕ್ಕೆ ಅನ್ವರ್ಥವಾಗುವದರಲ್ಲಿತ್ತು.

ಇಷ್ಟರಲ್ಲಿ ಹತ್ತಿರದಲ್ಲಿದ್ದ ಹೂದೋಟದಿಂದ ತೋಟಗಾರನು ಎರಡು ಉತ್ತಮವಾದ ಗುಲಾಬಿ ಹೂಗಳನ್ನು ತಂದು ಅವರಿಬ್ಬರಿಗೂ ಅರ್ಪಿಸಿದನು. ಅವರಿಬ್ಬರೂ ಕೂಡಲೆ ಪ್ರಸನ್ನಚಿತ್ತರಾದರು ; ಅದನ್ನು ಕೈಯಲ್ಲಿ ತೆಗೆದುಕೊಂಡು ತಿರುಗಿಸಿ ತಿರುಗಿಸಿ ನೋಡಿ ಅದರ ಅಂದವನ್ನು ಮೆಚ್ಚಿದರು. ಅದನ್ನು ಮೂಸಿ ಸುವಾಸನೆಯಿಂದ ಪ್ರಹೃಷ್ಟರಾದರು.

ಭಗವಂತನು ನಮ್ಮೆಲ್ಲರ ಹೃದಯದಲ್ಲಿರುತ್ತಾನೆಂದು ವೇದದಲ್ಲಿ ಹೇಳಿದೆ. ಆತನನ್ನು ನೆನೆದವರು ಸರ್ವಕಾಮನೆಗಳನ್ನೂ ಪಡೆಯುವರೆಂದೂ ಹೇಳಿದೆ. ಇದನ್ನು ಕಂಡುಕೊಂಡಿರುವ ಅನುಭವಿಗಳು ನಮಗೆ ಹೂದೋಟದವನಂತೆ ಅವನ ಕಡೆಗೆ ನಮ್ಮ ಚಿತ್ತವನ್ನು ತಿರುಗಿಸುತ್ತಾರೆ. ಅಲ್ಲಿಯವರೆಗೆ ನಾವು 'ದೇವರು ಹಾಗಿದ್ದಾನೆ, ಹೀಗಿಲ್ಲ' - ಎಂದು ಕಾದಿಕಾದಿ ಕಲ್ಲುಹಾಯುತ್ತಿರುವೆವು !



# ೪೭. ಜಯ ಜಯ ರಾಮ್

ಹರಿಹರದಲ್ಲಿ ಕೆಲವು ವರ್ಷಗಳ ಹಿಂದೆ ಒಬ್ಬರು ಸಂನ್ಯಾಸಿಗಳಿದ್ದರಂತೆ. ಅವರು ಆ ಊರಿನಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತವನ್ನು ಹೇಳಿಕೊಡುವದು, ಶುದ್ಧಾಚಾರವನ್ನು ಕಲಿಸಿಕೊಡುವದು - ಮುಂತಾದ ರೂಪದಲ್ಲಿ ಸಹಾಯಮಾಡುತ್ತಿದ್ದರಂತೆ . ಅವರು ನದಿಯ ದಂಡೆಯಲ್ಲಿ ಅಲ್ಲಲ್ಲಿ ಒಗೆಯುವ ಹಾಸು ಕಲ್ಲುಗಳನ್ನು ಹಾಕಿಸುವದು, ಬಂಡೆಗಳ ಮೇಲೆ ಜನರು ಜಾರಿಬೀಳದಂತೆ ಗಡಾರಿಗಳನ್ನು ನೆಡಿಸುವದು - ಇಂಥ ಕೆಲಸಗಳನ್ನು ಹುಡುಗರಿಂದ ಮಾಡಿಸುವಾಗ ಒಂದು ಉಪಾಯವನ್ನು ಉಪಯೋಗಿಸುತ್ತಿದ್ದರಂತೆ. ಅವರು ಬೆಳಗಿನ ಜಾವದಲ್ಲಿ ಹುಡುಗರನ್ನೆಲ್ಲ ಎಬ್ಬಿಸಿಕೊಂಡು, ಅವರಿಗೆ ಸಣ್ಣಸಣ್ಣ ಸ್ತೋತ್ರಗಳನ್ನು ಹೇಳಿಕೊಡುತ್ತಾ ನದಿಯ ಕಡೆಗೆ ಕರೆದುಕೊಂಡು ಹೋಗುತ್ತಿದ್ದರಂತೆ. ಹಾಸುಗಲ್ಲಿನ ಸುತ್ತಲೂ ಕೆಲವು ಹುಡುಗರನ್ನು ನಿಲ್ಲಿಸಿ, ''ನಾನು 'ಜಾನಕೀ ಜೀವನಸ್ಮರಣೆ !' ಎನ್ನುತ್ತಲೂ 'ಜಯ ಜಯ ರಾಮ್!' ಎಂದು ಘೋಷಿಸುತ್ತಾ ಒಮ್ಮೆಗೇ ಕಲ್ಲನ್ನು ಎತ್ತಿರಿ'' ಎಂದು ಅವರು ಹೇಳುತ್ತಿದ್ದರಂತೆ. ಹುಡುಗರು ಉತ್ಸಾಹದಿಂದ ಕಲ್ಲನ್ನು ಎತ್ತಿ ಒಂದೆರಡು ಮೊಳ ದೂರ ಸಾಗಿಸಿದ ಮೇಲೆ ಕೆಲಸವನ್ನು ನಿಲ್ಲಿಸಿ ಮುಂದಕ್ಕೆ ಸ್ನಾನಕ್ಕೆ ಹೊರಡುತ್ತಿದ್ದರಂತೆ.

ಜೀವನದಲ್ಲಿ ಕಲ್ಲಿನಂತೆ ಭಾರವಾದ ಎಷ್ಟೋ ಕಷ್ಟಗಳು ನಮಗೆ ಅಡ್ಡ ಬರುತ್ತವೆ. ಆದರೆ ಅವನ್ನು 'ಜಯ ಜಯ ರಾಮ್ !' 'ಹರ ಹರ ಮಹಾದೇವ !' - ಮುಂತಾದ ಜಯಘೋಷಗಳಿಂದ ಹಗುರವಾಗಿ ಅತ್ತ ಸರಿಯಿಸಿಕೊಳ್ಳಬಹುದು. ಶ್ರದ್ಧಾಭಕ್ತಿಗಳು ಮಾತ್ರ ಅವಶ್ಯ.



# ೪೮. ಇಗೋ ಇಲ್ಲಿರುವೆ !

ದೇವರನ್ನು ಕಾಣಲಿಲ್ಲವೆ ? ಸರಿಯಾದ ಮಾರ್ಗವು ದೊರಕಲಿಲ್ಲವೆ ? ಯಾರೊಬ್ಬರ ಉಪದೇಶವೂ ರುಚಿಸಲಿಲ್ಲವೆ ? ಜೀವನವೆಲ್ಲ ಕಷ್ಟಮಯವಾಗಿರುವದೆ ? ಆದರೂ ಚಿಂತಿಸದಿರಿ. ನಿಮಗೂ ದಾರಿಯಿದೆ. ಭಗವಂತನು ಎಲ್ಲೆಲ್ಲಿಯೂ ಇರುತ್ತಾನೆ , ಅವನು ಕ್ಷೇತ್ರಗಳಲ್ಲಿರುವಂತೆ ಕುಗ್ರಾಮಗಳಲ್ಲಿಯೂ ಇರುತ್ತಾನೆ. ಋಷಿಗಳ ಆಶ್ರಮದಲ್ಲಿರುವಂತೆ ಬಡವರ ಜೋಪಡಿಯಲ್ಲಿಯೂ ಇರುತ್ತಾನೆ. ಮಹಾತ್ಮರ ಹೃದಯದಲ್ಲಿರುವಂತೆ ಪಾಪಿಗಳ ಹೃದಯದಲ್ಲಿಯೂ ಇರುತ್ತಾನೆ.

'ಏನು ? ನಮ್ಮ ಗುಡಿಸಲಿನಲ್ಲಿದಾನೆಯೆ ? ಈ ನನ್ನ ಕಷ್ಟಸ್ಥಿತಿಯಲ್ಲಿ ಇದಾನೆಯೆ ? ಈಗಲೂ ಇಲ್ಲಿಯೂ ಇದಾನೆಯೆ ? ಹಾಗಾದರೆ ಅವನು ನನಗೆ ಏಕೆ ಕಾಣಿಸಲಿಲ್ಲ ! ನನ್ನನ್ನೇಕೆ ಮರೆತಿದಾನೆ ? ನನ್ನ ಸಂಕಟಗಳನ್ನು ಕಂಡರೂ ಏಕೆ ಸುಮ್ಮನಿದಾನೆ ?' ಎಂದು ನೀವು ಕೇಳಬಹುದು. ಅದಕ್ಕೆ ಭಗವಂತನ ಉತ್ತರವಿದು ; 'ನಿಜ, ಗುಡಿಸಲಿನಲ್ಲಿದೇನೆ ; ಆದ್ದರಿಂದಲೇ ಇನ್ನೂ ನಿಮಗೆ ಒಂದು ಗುಡಿಸಲು ಸಿಕ್ಕಿದೆ. ನಿನ್ನ ಕಷ್ಟದಲ್ಲಿದೇನೆ , ಆದ್ದರಿಂದಲೇ ಅದನ್ನು ತೆಗೆದುಕೊಂಡಿರುವೆ. ನಿನ್ನನ್ನು ಮರೆತಿಲ್ಲ , ನೀನು ನನ್ನನ್ನು ಮರೆತಿರುವೆ . ನಾನು ಸುಮ್ಮನಿಲ್ಲ , ನೀನು ನನ್ನ ವಿಷಯಕ್ಕೆ ಸುಮ್ಮನಿದೀಯೆ , ಆದರೂ ನಿನಗೆ ನಾನು ಸಹಾಯಮಾಡುತ್ತಲೇ ಇರುವೆನು.'

'ಭಗವಂತ, ಎಲ್ಲಿರುವೆ ? ' ಎಂದು ಹೃತ್ಪೂರ್ವಕವಾದ ಹಂಬಲಿನಿಂದ ಕೇಳಿರಿ. 'ಇಗೊ, ಇಲ್ಲಿರುವೆ ! ' ಎಂದು ನಿಮ್ಮ ಹೃದಯದಲ್ಲಿಯೇ ಉತ್ತರವನ್ನು ಕೊಡುವನು.



## ಕೆಲವು ಪುಟ್ಟ ಪುಸ್ತಕಗಳು

(ಹೊಸದಾಗಿ ವೇದಾಂತ ವಿಚಾರವನ್ನು ಆರಂಭಿಸುವವರಿಗೆ)

| | ಪು. | ರೂ. |
|---|---|---|
| **ಅಧ್ಯಾತ್ಮವೆಂದರೇನು ?** (ಅಧ್ಯಾತ್ಮ– ಎಂಬ ಮಾತಿನ ವಿವರಣೆ) | (28) | 5 |
| **ಶಂಕರಮಹಾಮನನ** (ಶಂಕರವೇದಾಂತದ ಕಿರುಪರಿಚಯ) | (30) | 5 |
| **ಆತ್ಮಬೋಧ** (ಪುಟ್ಟ ಪ್ರಕರಣ, ಭಾವಾರ್ಥದೊಡನೆ ) | (32) | 5 |
| **ಉಪನಿಷತ್ತುಗಳ ಮೊದಲನೆಯ ಪರಿಚಯ** –(ಕಥಾ ಸಂದರ್ಭಸಮೇತ) | (60) | 10 |
| **ವೇದಾಂತಬಾಲಬೋಧೆ** (ಪ್ರಾತಃಸ್ಮರಣಸ್ತೋತ್ರ ವ್ಯಾಖ್ಯಾನ) | (48) | 10 |
| **ವೇದಾಂತಪ್ರವೇಶಿಕೆ** ('ಅದ್ವೈತ ಪಂಚರತ್ನ'ಸ್ತೋತ್ರದ ವ್ಯಾಖ್ಯಾನ) | (74) | 10 |
| **ಆತ್ಮಪ್ರತಿಬೋಧ** (ಕೇನೋಪನಿಷತ್ತನ್ನು ಕುರಿತ ಪ್ರಬಂಧ) | (48) | 10 |
| **ವೇದಾಂತಕಥಾವಳಿ** (ತತ್ತ್ವವಿಚಾರಸಹಿತವಾದ 21 ಕಥೆಗಳು) | (60) | 10 |
| **ವಿಲಕ್ಷಣಮೌನಿ** (ಹತ್ತುಉಪನಿಷತ್ತುಗಳ ತಾತ್ಪರ್ಯ) | (24) | 5 |
| **ಸಮುದ್ರಮಥನ** (ಪೌರಾಣಿಕ ಕಥೆ; ರಹಸ್ಯಾರ್ಥದೊಡನೆ) | (76) | 6 |
| **ಮೋಹಮುದ್ಗರ** (ಭಜಗೋವಿಂದಂ ಸ್ತೋತ್ರ; ಭಾವಾರ್ಥದೊಡನೆ) | (16) | 6 |
| **ಸುತ್ತಿ ಪುಷ್ಪಾಂಜಲಿ** ( ಭಕ್ತರೆಲ್ಲರು ಅದರಲ್ಲೂ ಮಕ್ಕಳು ಕಂಠಪಾಠ–ಮಾಡಲು ಯೋಗ್ಯವಾದ ಶ್ಲೋಕಗಳು– ಪ್ರತಿಪದಾರ್ಥ ಸಹಿತ ) | (76) | 10 |
| **ಸರ್ವೇಷ್ಟ ಸಿದ್ಧಿ** (ಎಲ್ಲಾ ಕೋರಿಕೆಗಳೂ ನೆರವೇರುವ ಬಗೆ) | (48) | 6 |
| **ಭಗವದ್ಗೀತೆಯ ಸಾರ ಮತ್ತು ಪ್ರಧಾನೋಪದೇಶಗಳು** | (66) | 10 |
| **ಸದ್ಗುರುವಿನ ಅನುಗ್ರಹ** (ಒಂದು ಚಿಕ್ಕ ಪ್ರಬಂಧ) | (24) | 5 |
| **ಅಧ್ಯಾತ್ಮ ಶಂಕರವಿಜಯ** (ಶಂಕರರ ಜೀವನ ಚರಿತ್ರೆ) | (188) | 30 |
| **ಗೀತಾಮನನ** (101 ಶ್ಲೋಕಗಳಲ್ಲಿ ಗೀತೆಯ ಸಂಗ್ರಹ – ವಿವರಣೆ) | (50) | 10 |
| **ಗೀತಾ–ಸಾರ್ಥ** (ಮೂಲ, ಅರ್ಥ, ಟಿಪ್ಪಣಿ, ಮಹಾತ್ಮ್ಯ–ಸಹಿತ) | (375) | 20 |
| **ಸಚ್ಚಿದಾನಂದ ಸೂಕ್ತಿಗಳು** (ಶ್ರೀಶ್ರೀಗಳ 339 ಅಮೃತಸಂದೇಶಗಳು) | (83) | 20 |
| **ಸಚ್ಚಿದಾನಂದ ಮನನ** (ಶ್ರೀಶ್ರೀಗಳ 352 ಹಿತವಚನಗಳು) | (96) | 20 |